ಶ್ರೀ ತಿಪ್ಪಣ್ಣಾಚಾರ್ಯ ಕವಿಶೇಖರ ವಿರಚಿತ

# ಶ್ರೀ ಕಾಳೀಯ ಮರ್ದನ

---





ಧ ಪ್ರಕಟನಾಲಯ
ಂಗಳೂರು ೨.

ಬೆಲೆ : ೦-೬-೦

ಶ್ರೀ

# ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ

(ಮಾಸಪುಸ್ತಕ)

ಸಂಪುಟ ೫]     ಪ್ರಜೋತ್ಪತ್ತಿ ಸಂವತ್ಸರ     [ಸಂಚಿಕೆ ೮. ೯.

ಶ್ರೀ ತಿಪ್ಪಣಾರ್ಯ ಕವಿಶೇಖರ ವಿರಚಿತ

# ಕಾಳೀಯ ಮರ್ದನ




ಸಂಗ್ರಹಕಾರರು . ದಾಸರ ಲಕ್ಷ್ಮೀನಾರಾಯಣರಾವ್.
ವಿಮರ್ಶನಕಾರರು . . . 'ಹರಿದಾಸ ಸೇವಾ ಸಮಿತಿ'
ಸಂಪಾದಕರು . . . . ಯಂ. ರಾಮರಾವ್.

ಸುಬೋಧ ಪ್ರಕಟನಾಲಯ,

ಬೆಂಗಳೂರು ನಗರ.

ಬೆಲೆ ೦-೬-೦]     [ಟ. ಖ. ಪ್ರತ್ಯೇಕ

॥ ಶ್ರೀ ರಾಮಸಹಾಯಂ ॥

ಶ್ರೀ ಲಕ್ಷ್ಮೀನೃಸಿಂಹ ಪ್ರಸನ್ನ

ಶ್ರೀ ಸೀತಾಲಕ್ಷ್ಮಣ ಭರತಶತ್ರುಘ್ನ ಹನುಮತ್ಸಮೇತ ಶ್ರೀ ರಾಮಚಂದ್ರ ಪರಬ್ರಹ್ಮಣೇ ನಮಃ

ನವಸಾಲಪುರೀ ಶ್ರೀ ತಿಪ್ಪಣಾರ್ಯಕವಿವರ್ಯ ವಿರಚಿತ

## ಯಕ್ಷಗಾನ

# ಕಾಳೀಯಮರ್ದನ ಚರಿತ್ರೆಯು

ಹರಿಃ ಓಂ

ದ್ವಿಪದಿ:—

ಶ್ರೀ ವಿಘ್ನರಾಜನ ಶ್ರೀಪಾದಗಳನು
ಭಾವಿಸಿ ಮನದಿ ಸದ್ಭಕ್ತಿಪೂರ್ವಕದಿ ೧
ಕೈವಲ್ಯಪದವೀವ ಖಾದ್ರಿನರಿಹರಿಯ
ಸೇವಿಸಿ ಇಂದಿರಾದೇವಿಯಂ ನಮಿಸಿ ೨
ಚತುರಾಸ್ಯಗೊಂದಿಸಿ ಶಾರದೆಗೆ ನಮಿಸಿ
ನುತಿಸಿಮಾರುತಿಯ ಭಾರತಿಯ ಸಂಸ್ಮರಿಸಿ ೩
ಬಲವಂದು ಶಂಕರಗೆ ಪಾರ್ವತೀಗೆರಗಿ
ಬಲವಿದಾರಣಶಚಿಯ ಪ್ರಸ್ತುತಂಗೈದು ೪
ಇತರದೇವರ್ಕಳಂ ಹಿತದಿಕೊಂಡಾಡಿ
ಮತಿಯಿಂದ ಗುರುವಿಗೆ ನಮಸ್ಕರಿಸಿ ಮುದದಿ ೫
ವ್ಯಾಸವಾಲ್ಮೀಕಾದಿ ವರಕವೀಶ್ವರರ
ಭಾಸುರದಿಂಪೊಗಳಿ ಪರಮಹರುಷದಲಿ ೬

ಕಾಳೀಯಮರ್ದನನ ಘನಚರಿತ್ರೆಯನು
ಪೇಳುವೆ ಸದ್ಭಕ್ತರಾಲಿಸುವಂತೆ ೭

ಯತಿಗಣಪ್ರಾಸ ನೇಮಾದಿ ಲಕ್ಷಣಗ
ಳತಿಶಯದೊಳರಿಯೆ ಶ್ರೀಪತಿಯೆ ಗತಿಯೆನಗೆ ೮

ತಪ್ಪುಳ್ಳೊಡರಿತು ಸತ್ಕವಿಗಳುಕೇಳಿ
ಒಪ್ಪದಿಂತಿದ್ದುವುದು ವರ್ಣಗಳನರಿತು ೯

ವಚನ:—

ಈ ಪ್ರಕಾರದಿಂ ಇಷ್ಟದೇವತಾ ಪ್ರಾರ್ಥನೆಯಂ ಮಾಡಿ ನಾವಿರಚಿಸಿದ, ಕಾಳೀಯಮರ್ದನನಾದ ಶ್ರೀಕೃಷ್ಣನ ಕಥಾಪ್ರಾರಂಭಮದೆಂತೆನೆ.—

ಕಂದ:—

ಅರಸಾದ ಪರೀಕ್ಷಿತನಿಗೆ
ವರಶುಕಮುನಿಪೇಳ್ದ ಭಾಗವತವಂ ಹರುಷೋ
ತ್ಕರುಷದಿ ಶೌನಕಮುಖ್ಯರಿ
ಗರುಹಿದನಾ ಸೂತಮುನಿಪನತಿ ಶುಭಮಿದೆನಲ್

ತ್ರಿಪದಿ:—

ಕ್ರೂರಕಂಸಾದಿಗಳ ದೆಸೆಯಿಂ
ಧಾರುಣಿಗೆ ಕಡುಭಾರವಾದ ವಿ
ಚಾರವಚನವಕೇಳ್ದನುದಧಿಯೊಳಾರಮೇಶ ೧

ಯೋಗನಿದ್ರೆಯನುಳಿದು ಕರುಣಾ
ಸಾಗರನು ದೇವಕಿಯಗರ್ಭದಿ
ಬೇಗಜನಿಸಿದಜಗಕೆ ಮಂಗಳವಾಗಲಾಗ ೨

ವಿಮಲಶ್ರಾವಣಮಾಸ ಕೃಷ್ಣಾ
ಷ್ಟಮಿಯು ರೋಹಿಣಿ ತಾರೆಯಲಿ ಶ್ರೀ
ರಮಣನುದಿಸಿದನರ್ಧರಾತ್ರಿಯೊಳಮರರುಲಿಯೆ ೩

ತಂದೆತಾಯ್ಗಳಮನದ ಸಂಶಯ
ನೊಂದಿಸಲು ಪ್ರತ್ಯಕ್ಷರೂಪದಿ
ನಿಂದು ಪರಮಾನಂದಗೈದು ಮುಕುಂದನೆಂದ ೪

ನಂದಗೋಕುಲದಲ್ಲಿ ನಂದನ
ಮಂದಿರದೊಳಿನ್ನಿಟ್ಟು ದುರ್ಗಿಯ
ತಂದು ಕಂಸಗೆ ತೋರಿ ಕಾರ್ಯದಮುಂದಿನನುವ ೫

ವಚನ:—

ಇಂತು ನಿರೂಪಿಸಿದ ಬಳಿಕದೆಂತೆನೆ.—

ಜೋಲಪದ:—

ತಂದೆಯ ಹಸ್ತಾಬ್ಜದಲ್ಲಿ ನಿಂದು ಯಮುನೆಯದಾಂಟಿ
ಬಂದು ನಂದಗೋಕುಲದಲ್ಲಿ, ಗೋಪಿದೇವಿಗೆ
ಕಂದನೆಂದೆನಿಸಿದನಾಗ ೧

ನಂದಗೋಪಗೆ ಆಪ್ತರಾದ ಬಂಧುಬಳಗವೆಲ್ಲರೈದಿ
ಬಂದರಾಗ ಕೃಷ್ಣಮೂರ್ತಿಯ, ಕಾಣುತ್ತ ಪರಮಾ
ನಂದದಿಂದ ತೊಟ್ಟಿಲೊಳಿಟ್ಟರು ೨

ಜೋಜೋನಂದಗೋಪಪುತ್ರ ಜೋಜೋನಿರ್ಮಲಚಾರಿತ್ರ
ಜೋಜೋನೀಲಾಂಬುದಗಾತ್ರ, ಶ್ರೀಕೃಷ್ಣದೇವ
ಜೋಜೋಯೆಂದು ಪಾಡಿದರಿಂತು ೩

ಶಾರ್ದೂಲವಿಕ್ರೀಡಿತವೃತ್ತ.—

ನಂದಾಗಾರದೊಳಿಂತು ಕೃಷ್ಣಪರಮಾನಂದಾತ್ಮನಾಗಿರ್ದ ಬಾ
ಲೇಂದು ಪ್ರಾಭವದತ್ತಲಾ ಮಧುರೆಯೊಳ್ನಂದಾಂಗನಾ ಪುತ್ರಿವಾ
ಗ್ವೃಂದಾರಾಜಿತದಿಂದ ಕಂಸತಿಳಿದಾ ಇಂದೀವರ ಶ್ಯಾಮನಂ
ಕೊಂದೇನೆಂದು ದುರಾತ್ಮ ಯೋಚಿಸಿದ ವೃದ್ಧೇಂದು ಪ್ರಭಾನಂದದಿಂ

ವಚನ:—

ಇಂತು ಯೋಚಿಸಿ ದನುಜರ್ಗೆ ನಿರೂಪವಂ ಕೊಟ್ಟು ನಾನಾ ವಿಧೋ

ಸಾಯದಿಂ ಶ್ರೀ ಕೃಷ್ಣನಂ ಜೈಸಿರೆಂದು ಕಳುಹುತ್ತಿರಲನಂತರದೋಳ್ ಗೋಕುಲದೊಳೆಂತೆನೆ.—

ಝಂಪೆ:—

ವನಿತೆಯಂದದಿ ಪೂತನಿಬಂದು ವಿಷದ ಮೊಲೆ
ಯನು ಕೊಡಲವಳ ಜೀವವಹನನಗೈದ ೧

ಬಂಡಿಯಂದದಿಬಂದ ಭಂಡ ಶಕಟಾಸುರನ
ಚೆಂಡಾಡಿದನು ತಲೆಯ ಗಂಡುಗಲಿ ಕೃಷ್ಣ ೨

ನಂಬದೆ ತೃಣಾವರ್ತನೆಂಬ ದೈತ್ಯಾಗ್ರಣಿಯ
ಬೆಂಬಿಡದೆ ಮರ್ದಿಸಿದ ನಂಬುಜೋದರನು ೩

ಬಾಲಲೀಲೆಯ ರಚಿಸಿ ಹಾಲುಬೆಣ್ಣೆಯ ಸವಿದು
ಮೇಲೆ ಚೋರರಿಗೆ ಜಾರರಿಗೆ ಗುರುವಾದ ೪

ಅಂಬರದಲಿಹ ಚಂದ್ರಬಿಂಬವನು ಹಣ್ಣೆಂದು
ಇಂಬಾಗಿಪಿಡಿದನಾ ಕಂಬುಕಂಧರನು ೫

ಬಾಯೊಳಗೆ ಬ್ರಹ್ಮಾಂಡದಾಯತವ ತೋರಿದನು
ತಾಯಾದ ಗೋಪಿಗೆ ನಿರಾಯಾಸದಿಂದ ೬

ದುರುಳತನವನುಮಾಡಿ ಒರಳಬಂಧಕೆ ಸಿಲುಕಿ
ಮರಗಳನು ಕೆಡಹಿ ಗಂಧರುವರನುಗೈದ ೭

ಖರ ಬಕಾಸುರನಘಾಸುರನವತ್ಸಾಸುರಾ
ದ್ಯರನು ಬೃಂದಾವನಾಂತರದಿ ಜೈಸಿದನು ೮

ಪರಮೇಷ್ಠಿಗಾಗಿ ಗೋವರರೂಪು ಗೋರೂಪು
ಧರಿಸಿದನು ಬ್ರಹ್ಮನುಪಚರಿಸಿ ಮನ್ನಿಸಿದ ೯

ಧೇನುವಂದದಿಬಂದ ಧೇನುಕಾಸುರನೆಂಬ
ದಾನವನ ಕಾಲನಿಗೆ ದಾನವನ್ನೆರೆದ ೧೦

ಇನಿತು ಲೀಲೆಗಳ ಕೃಷ್ಣನುಮಾಡುತಿರಲೊಂದು
ದಿನ ಸೂರ್ಯನಸ್ತಮಿಸಿದನು ರಾತ್ರಿಗಳೆಯೆ ೧೧

ಕಂದ:—

ಗುರುಕರುಣದಿಂದ ಜೀವನೊ
ಳಿರದೋಡುವ ಭ್ರಾಂತಿಯಂತೆ ತರಣಿಯುದಯದೋಳ್
ಧರಣಿಯೊಳಗಿರ್ದತಿಮಿರವು
ಪರಿದವು ಜನಮನಕೆ ಪರಮಹರುಷವು ಲಭಿಸಲ್

ವಚನ:—

ಇಂತಾದ ಸೂರ್ಯೋದಯಾನಂತರದೋಳ್ ನಿದ್ರಾಂಗನಾಲಿಂಗಿತನಾಗಿರುವ ಶ್ರೀ ಕೃಷ್ಣಮೂರ್ತಿಯಂ ಗೋಪಿದೇವಿಯೆಬ್ಬಿಸುತಿರ್ದಳದೆಂತೆನೆ.

ಸೀಸಪದ್ಯ:—

ಬೆಳಗಾಯಿತೇಳ್ಳೈಯ ನಳಿನಪತ್ರೇಕ್ಷಣ
ಗೆಳೆಯರೆಲ್ಲರು ಕೊಂಬುಕೊಳಲನಾಂತು
ಸೆಳೆಗೋಲು ಕವಣೆ ಬಿಲ್ಗಳು ಚೆಂಡುಬುಗುರಿಗ
ಜ್ಜುಗ ಗೋಲಿ ಕಲ್ಲಿಬುತ್ತಿಗಳು ಕೈಯ
ಕರುಗಳೊಂದೆಸೆ ದೊಡ್ಡ ತುರುಗಳೊಂದೆಸೆ ಗೂಳಿ
ಗಳ ಮಂದೆಯೊಂದೆಸೆಗಳನುಗ್ಗೈದು
ಬಂದು ನಿನ್ನಯಮಾರ್ಗವಿಂದು ನೋಡುತಲಿಗೋ
ವಿಂದ ಮಾಧವನೇಳಿಸೆಂದು ಮುದದಿ
ಮಂಗಳಾತ್ಮಕ ಹೃದರೆಮ್ಮಂಗಳದಲ್ಲಿ
ನಿಂದು ಕರೆಯುತ್ತಲೈದಾರೆಯೆಂದು ಗೋಪಿ
ಏಳಿಸಲು ಬೇಗ ಬಾಲಗೋಪಾಲಕೃಷ್ಣ
ಮುದ್ದುಸುರಿಯುತ್ತ ಮೈಮುರಿದೆದ್ದನಾಗ

ವಚನ:—

ಇಂತುಪ್ಪವಡಿಸಿದ ಶ್ರೀ ಕೃಷ್ಣಮೂರ್ತಿಯಂ ಗೋಪೀದೇವಿ ಶೃಂಗರಿಸುತಿರ್ದಳದೆಂತೆನೆ.—

ರಾಗ ಪಂತುವರಾಳಿ ರೂಪಕತಾಳ

ಏನುಧನ್ಯಳೋ ಗೋಪಿಯೆಷ್ಟುಪುಣ್ಯಳೋ ಪ.
ಶ್ರೀನಿವಾಸನಾದಕೃಷ್ಣನ ಶೃಂಗರಿಸುವಳು ಕೈಯದಣಿಯ ಅ.

ಗಂಗೆಯನ್ನು ಪಡೆದ ದಿವ್ಯಉಂಗುಟವುಳ್ಳ ರಂಗನಿಗೆ
ಅಂಗನೆಗಡಿಗೆ ನೀರತಂದು ಮಂಗಳಮಜ್ಜನಗೈಸಿದಳು ೧

ಹೊಂಬಣ್ಣವಾದ ಪೀತಾಂಬರನಿಗೆ ಸೀರೆಸೆರಗ
ನಿಂಬಾಗಿ ಒರೆಸಿದಿವ್ಯಅಂಬರವುಡಿಸಿ ಪೊದ್ದಿಸಿದಳು ೨

ಸುರರಕುಲಕೆ ತಿಲಕನಾದ ಹರಿಯಫಾಲಭಾಗದಲ್ಲಿ
ತರುಣಿಯಚ್ಚಹಸಿಯ ಕಸ್ತೂರಿಯ ತಿಲಕವನ್ನು ಇಟ್ಟಳು ೩

ಸ್ಮರನಜನಕಸದ್ಗುಣಾಭರಣನಾದ ಮಾಧವಂಗೆ
ಭರಿತಬಾಲತೊಡಿಗೆಗಳಾಭರಣಗಳಲಂಕರಿಸಿದಳು ೪

ಶರಣರಾದ ಸುರರು ಜನನ ಜರೆಯುಮರಣವಾಗದಂತೆ
ಪಿರಿದು ಸುಧೆಯ ನೆರೆದವಂಗೆ ಕರೆದು ಉಣ್ಣಬಡಿಸಿದಳು ೫

ಉತ್ತಮರಿಗೆ ಮೋಕ್ಷಪದವಿ ಇತ್ತು ರಕ್ಷಿಸುವ ಹರಿಗೆ
ಮತ್ತಕಾಶಿನಿಕಲ್ಲಿಯೋಗರ ಬುತ್ತಿಯಿತ್ತು ಕಳುಹಿದಳು ೬

ಪರಮತಂತ್ರ ಸ್ವಾತಂತ್ರತರನ ಖಾದ್ರಿನಾರಸಿಂಹನ
ತುರುಗಳನ್ನು ಕಾಯಪೋಗಿ ತಿರುಗಿಬಾರೆಂಬುವಳು ೭

ವಚನ:—

ಇಂತು ಶೃಂಗಾರಯುಕ್ತನಾಗಿ ಪೊರಟನದೆಂತೆನೆ.—

ರಾಗ ಸೌರಾಷ್ಟ್ರ ಅಟತಾಳ

ಪೊರಟನು ಶ್ರೀ ಕೃಷ್ಣ ತುರುಗಳಕಾಯೆ
ಗೋವ್ಗಳಕಾಯೆ ಜಗಂಗಳಕಾಯೆ ತಾ ಪ.

ಮೆಟ್ಟಿದು ಮೆಟ್ಟುಗಳುಟ್ಟುದು ಚಲ್ಲಣ
ದಟ್ಟೆಯಲುಡಕಟ್ಟೆ ಜಗಜಟ್ಟಿ ೧

ಬಗಲೊಳು ಕಲ್ಲಿಯ ಬುತ್ತಿಗಳೆಸೆಯೆ
ಹೆಗಲೊಳು ಕವಣೆಗಳು ಬಾಣಗಳು ೨

ಕರದಲ್ಲಿ ಮುರಳಿಯು ಶಿರದಲ್ಲಿ ನವಿಲು
ಗರಿಯ ತುರಾಯಿ ಚಂದದಿಂದ ೩

ಮುರಳಿಯನೂದಲು ತುರುಗಳುಬರಲು
ತುರುಸಹಿತ ದಯದಿಂದಾನಂದಾ ೪

ಉದಿಯಲ್ಲಿ ಗಜ್ಜುಗ ಹಿಡಿಯಲ್ಲಿ ಬುಗುರಿ
ಪಿಡಿದಿಹ ಸೆಳೆಗೋಲಲೋಲ ೫

ಕಾವೇರಿ ಗಂಗೆ ಗೋದಾವರಿಯೆಂದು
ಗೋವುಗಳ ಕರೆಯುತ್ತ ನಗುತ್ತ ೬

ಮೋದದಿ ಬೊಮ್ಮಾದಿ ಸುರರು ನೋಡಲು
ಖಾದಿರಿ ನರಹರಿಯ ಸಿರಿಯು ೭

ವಚನ:—

ಇಂತು ಪೊರಟು ಗೆಳೆಯ ಬಾಲಕರೊಡನೇನೆನ್ನುತಿರ್ದನು:—

ಕುರುಕು ಝುಂಪೆ:—

ಬನ್ನಿರೊ ಗೋವಳರು ಬೇಗ ತುರುಗ
ಳನ್ನು ಪೊರಡಿಸಿ ಪೊಳಲನೀಗ ೧
ಹೊತ್ತು ಬಹಳಾಯ್ತು ಗೋವ್ರಗಳಿಗೆ ನೋ
ಡತ್ತಲೇರಿತು ನಾಲ್ಕು ಘಳಿಗೆ ೨
ಹಸಿದವೆಮ್ಮಯ ಪಶುಗಳೆಲ್ಲ ಇಂದು
ಬಿಸಿಲು ಕಡುಚುರುಕಾಯಿತಲ್ಲ ೩
ಸ್ವಾದುಜಲ ಹಸಿಯತೃಣವುಳ್ಳ ಬಳಿಗೆ
ಪೋದಪೆವು ಬನ್ನಿ ನೀವೆಲ್ಲ ೪
ಬೃಂದಾವನಾಂತರಸ್ಥಳಕೆ ಪೋಗು
ವಿಂದು ಕಂದುಗಳಕಾಯ್ವುದಕೆ ೫

ದ್ವಿಪದಿ:—

ಇಂತು ಗೋವಳರೊಳಾ ಕಂತುಪಿತ ನುಡಿದು
ಸಂತೋಷಯುಕ್ತದಿಂದಂತರಾತ್ಮಕನು ೧

ನವರತ್ನ ಖಚಿತದಿಂ ಪ್ರವಿಮಲವಾದ
ನವರಂಧ್ರಯುತದಿಂದ ನವ್ಯತರವಾದ ೨

ವಂಶನಾಳವ ವೃಷ್ಣಿವಂಶಾಗ್ರಗಣ್ಯ
ಪುಂ ಶಿರೋರತ್ನ ಸರ್ವಂಸಹಾರಮಣ ೩

ಜಲಜದಂದದೊಳಿರುವ ತಳಿರ ಸೋಲಿಸುವ
ಜಲಜ ಶಂಖಗದಾದಿ ಬಲುರೇಖೆ ಪೊಳೆವ ೪

ಸಿರಿಯ ಕುಚಕುಂಭ ಸಂಸ್ಪರುಶನದಿ ಮೆರೆವ
ಕರದಿಂದ ಪಿಡಿದು ಸುಷಿರಗಳನಾರೈದು ೫

ಮಂಜುಳಾತ್ಮಕವಾದ ಮಧುರತರವಾದ
ಹೊಂಜಿಗುರು ನಗುವ ಬಿಂಬವ ಜೈಸುತಿರುವ ೬

ಸಾರತರ ರುಚಿಗಳಿಗೆ ತೌರುಮನೆಯಾದ
ಸಾರಚೆಂದುಟಿವೀಂಟೆ ಸವಿಯುಲು ಧರಿಸಿ ೭

ಸಪ್ತಸ್ವರಗಳಿಂದ ಸರಿಗಮ ಪಧನಿ
ಸಪ್ತತಾಳಗಳಿಂದ ಸಾಂಪ್ರದಾಯಕದಿ ೮

ಲಯದಲಕ್ಷಣವು ತಾಳಗಳಲಕ್ಷಣವು
ಲಯವಾಗದಂತೆ ಪಾಲಯನಾಗಿ ಮುದದಿ ೯

ನಾಟಿಗೌಳವರಾಳಿ ನವರೋಜು ಸುರಟಿ
ನಾಟಕುರಂಜಿ ಕಾನಡದ್ವಿಜಾವಂತಿ ೧೦

ಕನ್ನಡಕಾಂಬೋಧಿ ಕಲ್ಯಾಣಿತೋಡಿ
ಘನ್ನಭೈರವಿಯಾನಂನ ಬೈರವಿವಸಂತ ೧೧

ಭೈರವಿಬಿಲಹರಿ ಪಾಡಿ ಸಾರಂಗ
ಮಾರವೀಗುರ್ಜರೀ ಮಲಹರೀ ಫರಜು ೧೨

ಆರಭಿ ನಾಗಗಾಂಧಾರಿ ನಾಯಕಿಯು
ಧೀರಶಂಕರಾಭರಣ ನಿರುಪಮಮುಖಾರಿ ೧೩

ಸಾವೇರಿಆಹೇರಿ ಅಸಾವೇರಿಮಧ್ಯ
ಮಾವತಿದೇಶಿ ಶ್ರೀಮಾಳವಿ ಮೇಘ ೧೪

ರಂಜನಿ ಕುರಂಜಿ ಗೌರೀರಾಗ ಘಂಟಾ
ಮಂಜುಳ ಕೇದಾರ ಮಹಿತ ಕಾಂಬೋಧಿ ೧೫

ಯಮುಕುಲಕಾಂಬೋಧಿ ಚಂಚುಕಾಂಬೋಧಿ
ಮುದದಿಭೂಪಾಳಿ ಕೋಕಿಲವರಾಳಿ ೧೬

ನೀಲಾಂಬರೀ ಕಾಪಿ ನಿಪುಣವಸಂತ
ಲಲಿತಗುಂಡಕ್ರಿಯ ನಾದನಾಮಕ್ರಿಯ ೧೭

ಬ್ಯಾಗಡೆ ದರಬಾರು ಕೇತಾರಗೌಳ
ರಾಗ ಪುನ್ನಾಗ ವರಾಳಿಯು ಶಹನ ೧೮

ರಾಗ ತತ್ತದ್ದೇಶರಾಗ ಮುಖ್ಯಗಳ
ರಾಗ ವಿರಹಿತನಾಗ ರಾಗರಂಜಿತದಿ ೧೯

ಸ್ಥಾವರಜಂಗಮಾತ್ಮಕವಾದ ಸಕಲ
ಭಾವಿತಗೀತ ಸುಳಾದ್ಯುಗಾಭೋಗ ೨೦

ಪದ್ಯಗದ್ಯಗಳು ಪ್ರಬಂಧಾಷ್ಟಕಗಳು
ಹೃದ್ಯಚೂರ್ಣಿಕೆ ಯಕ್ಷಗಾನಾದಿಗಾನ ೨೧

ಸಹಜ ನಿರಾಯಾಸ ಜಾತಿ ಸಂಕರವು
ರಹಿತದಿಂದರಿತು ಕರ್ಣಾಮೃತ ಮುರಳಿ ೨೨

ಗಾನದಿಂ ಗೋವುಗಳ ಕರೆವ ಸಂಭ್ರಮವ
ದೇನೆಂಬೆ ಭೂಪ ಸನ್ಮಾನಪೂರ್ವದಲಿ ೨೩

ಗಂಗೆ ಗೋದಾವರೀ ಗೌರಿ ಶ್ರೀ ಲಕ್ಷ್ಮಿ
ತುಂಗಮಂಗಳೆ ಸರ್ವಮಂಗಳೆ ಯಮುನೆ ೨೪

ಕಾವೇರಿ ಗಾಯಿತ್ರಿ ಸಾವಿತ್ರಿ ಕಪಿಲೆ
ದೇವಿಪಾವನೆ ಭದ್ರೆ ಪಾರ್ವತೀ ಗಿರಿಜೆ ೨೫

ಭಾರತೀ ಸರಸ್ವತೀ ಪಾಂಚಾಲಿ ಮಗಧೆ
ತಾರೆಯರುಂಧತಿ ಶ್ರೀ ರಮಾ ಸೀತೆ ೨೬

ದೇವಕೀದೇವಿ ಶ್ರೀದೇವಿ ಭೂದೇವಿ
ರೋಹಿಣೀ ರತಿದೇವಿ ರುಚಿರೆ ಅಹಲ್ಯೆ ೨೭

ಎಂಬ ನಾಮಗಳಿಂದ ಹೊಂಬಣ್ಣದಿಂದ
ಇಂಬಾದ ಗೋವುಗಳ ಹಿತದಿ ಕರೆಯುತಲಿ ೨೮

ಹನುಮಂತ ಜಯವಂತ ಅತಿಶುಭವಂತ
ಚಿನುಮಯ ಸಾರಂಗ ಚಿತ್ರಾಂಗ ಭೀಮ ೨೯

ಸೇನ ವಸಂತ ಮನ್ಮಥ ದೀರ್ಘಶೃಂಗ
ಶ್ರೀ ನಾರಸಿಂಗ ಕಂಠೀರವ ಗರುಡ ೩೦

ವಸುದೇವ ಸುನಂದ ಕಂದರ್ಪಾನಿರುದ್ಧ
ಶಶಿವರ್ಣ ವೃಷಭೇಶ ಶರಭ ನಂದೀಶ ೩೧

ರುದ್ರಶಂಕರನೆ ಭೇರುಂಡ ಚಮುವೀರ
ಭದ್ರಭೈರವ ಗರುಡ ಭಾನು ಶಶಿವದನ ೩೨

ಇಂತಪ್ಪ ಪೆಸರುಗಳ್ ಹಿತದಿ ಶೋಭಿಸುವ
ದಂತೀಂದ್ರನ ಸಮಾನಾದಂಥ ವೃಷಭಗಳ ೩೩

ಕರೆವುತ್ತ ಮೃದು ವೇಣುಗಾನಂಗಳಿಂದ
ಕರೆವ ಸಂತಸವ ಅಂಬರದಿ ಬ್ರಹ್ಮಾದಿ ೩೪

ಸುರರು ನಾರದರು ತುಂಬುರರು ಗಂಧರ್ವ
ವರರು ಕಿನ್ನರರು ಕಿಂಪುರುಷಾದಿಯಾಗಿ ೩೫

ತಲೆದೂಗಿ ಗೋವ್ರಗಳ ಸಲೆ ಪುಣ್ಯಸಲವ
ಪಲವು ವಿಧದಲಿ ಪೊಗಳಿ ಪಾಡಿ ಪರಸುತಲಿ ೩೬

ಸುರರಂಬರದಿ ಪುಷ್ಪವರುಷಗಳ್ ಸುರಿಸಿ
ತುರುವಿಂಡುಗಳ ರಮಾವರನು ಶೀಘ್ರದಲಿ ೩೭

ಕರೆದೊಯ್ದ ತೃಣರಾಶಿಯುಳ್ಳ ಆ ವನಕೆ
ಪರಮ ಹರುಷದಿ ತನ್ನ ಸಹಚರರ ಕೂಡಿ ೩೮

ವಚನ:—

ಇಂತು ವನಕ್ಕೊಯ್ದು ನೋಡುತ್ತಿರಲಾ ವನವೆಂತಿರ್ದುದೆನೆ.—

ಗದ್ಯ:—

ಲಕ್ಷ್ಮೀಮನ್ಮಥಸೇವಿತದಿಂ ಮುಕುಂದನಂ, ಮುಕುಂದಾಲಂಕೃತದಿಂ ವೈಕುಂಠವಂ, ಶಾರದಾ ಭಾಸ್ವರದಿಂ ಬ್ರಹ್ಮನಂ, ಬ್ರಹ್ಮಾವಸ್ಥದಿ ಭಾಸುರದಿಂ ಸತ್ಯಲೋಕವಂ, ಅರ್ಜುನ ಗೋಪೀಬಲಭದ್ರಸಮೇತದಿಂ ಶ್ರೀ ಕೃಷ್ಣನಂ, ಕೃಷ್ಣಲೀಲಾವಿಲಾಸದಿಂ ನಂದಗೋಕುಲವಂ, ಸರ್ವಮಂಗಳಾವಾಸದಿಂ ಶಿವನಂ, ಶಿವಮನೋಲ್ಲಾಸ ಕಾಂತಿಪ್ರದದಿಂ ಕೈಲಾಸಮಂ, ದೇವವಲ್ಲಭ ಐರಾವತ ಸುಮನೋರಂಭಾ ಸಂಭ್ರಮತ್ವದಿಂ ಸ್ವರ್ಗವಂ, ದಧಿಪಲ್ಲವ ವರವಧೂಟಿರಾಜಿತದಿಂ ವೈವಾಹ ಮಂಟಪವಂ, ವೈದೇಹ್ಯಾನುವರ್ತನಾಭಿರಾಮವಾಗಿ ಸುಷೇಣಪ್ಲವಂಗ ಸಂಯುಕ್ತದಿಂ ರಾಮಾಯಣವಂ, ವ್ಯಾಸಚಿತ್ರ ವಿಚಿತ್ರವಾಗಿ ಶಲ್ಯದ್ರೋಣಪರಿವೃತದಿಂ ಭಾರತವಂ, ಶುಕವಾಕ್ಯಾಭಿರಾಮವಾಗಿ ಭಾಗವತವಂ, ನೀಲಕಂಠಚರ್ಯಾವಭಾಸಿತದಿಂ ಶೈವಪುರಾಣವಂ ಗಣಿಕಾಲಂಕೃತದಿಂ ವೇಶ್ಯಾವಾಟಿಯಂ ಪೋಲುತ್ತಿರುವ ವನದೊಳ್ ಮತ್ತೆಂತಿರ್ದುದೆಂತೆನೆ.—

ಅಷ್ಟಕ:—

ಸಕಲರನು ರಕ್ಷಿಸುತ ದೈತ್ಯ
ಪ್ರಕರವನು ಶಿಕ್ಷಿಸುತಲಿ
ಲಕುಮಿವಲ್ಲಭನಿರುವ ತೆರದಿಂ
ದಖಿಳರಿಗೆ ಸಂಭ್ರಮದಲಿ
ವಿಕಸಿತದಲಿ ಸುಗಂಧದಾನಾ
ತ್ಮಕದಿ ಭ್ರಮರಕಹಿತದಲಿ
ಚಕಿತಗೊಳಿಸುವ ದಿವ್ಯತರ ಚಂ
ಪಕಗಳಿರ್ದವು ವನದಲಿ ೧

ಚಾರುತರ ಗಂಗೆಯನು ಧರಿಸಿ ಮ
ಹಾರಜೋಗುಣ ರಹಿತದಿ
ಸಾರತರ ಕರ್ಪೂರ ಶಾರದ
ನಾರದಾಭದ ದೇಹದಿ
ಮೂರು ನಯನದಿ ಸರ್ವಮಂಗಳ
ಕಾರಿಗತಿಹಿತಪೂರದಿ
ನಾರಿಕೇಳಗಳೊಪ್ಪುತಿರ್ದವು
ಮಾರವೈರಿಯ ಭಾವದಿ ೨

ಮುದದಿ ವೃಕ್ಷಗಳೆಲ್ಲ ಪ್ರತಿವರು
ಷದಲಿ ಪಲ್ಲವ ಕುಸುಮವು
ಸದಮಲದ ಫಲಗಳನು ಪಡೆದು ಸು
ಖದಲಿ ತಾವಿರುತಿರುವವು
ಸದರವಾದೆವು ಒಂದೆ ಫಲ ನ
ಮ್ಮುದಯ ಪುಣ್ಯವಿಹೀನವು
ಬದುಕಲ್ಯಾಕೆಂದೆನುತ ತಲೆವಾ
ಗಿದ ಕದಳಿಗಳನೇಕವು ೩

ಮಲಿನವಸನದೊಳಿರುವ ರತುನವು
ಬಲು ಹಿಮದೊಳಿಹ ಸೂರ್ಯನು
ಜಲಧರನ ಮರೆಯಲ್ಲಿ ಬೆಳಗುವ
ಜಲಜ ವೈರಿಯ ಕಳೆಗಳು
ಬಲಿದ ಭಸ್ಮದೊಳಿರುವ ಶಿಖಿಯೋಲ್
ತಿಳಿಯದಾತ್ಮಜ್ಞಾನವು
ಹಲಸು ಇಂತಿಹುದವ್ವ್ಯತ ಕಂಟಕ
ದೊಳಗೆ ಆವನಮಧ್ಯದಿ ೪

ಹರನ ಶಿರದಿಂದಿರೆ ತಿರಸ್ಕೃತ
ವೆರೆಸಿ ಮದನ ಕಠಾರಿಯಾ
ಗಿರಲು ಮನ್ಮಥ ಶಿವನದೆಸೆಯಿಂ
ಪರಿಯಲಾಗ ವಿರಕ್ತಿಯಾ
ಧರಿಸಿ ನೀರಲಿನಿಂದು ಫಣೆಗಳ
ಬೆರೆಸಿ ಭೂತಿಯ ಪೂಸಿಯಾ
ಶ್ಚರಿಯ ತಪವಿರುವಂತೆ ಕೇತಕಿ
ತರುಗಳಿರ್ದವನೇಕವು ೫



ತರುಗಳೆಲ್ಲವು ಪುಷ್ಪವತಿಯಾ
ಗುರುತರದ ಫಲವೃತ್ತಿಗಳ್
ಧರೆಯೊಳಾಹವು ಚಿತ್ರಮಲ್ಲಿದು
ಭರದಿ ನಾವೀರ್ವರುಗಳು
ಧರಣಿಯೊಳ್ ಸುಮವತಿಗಳಾಗದೆ
ಭರಿತವಹ ಫಲವತಿಗಳು
ನೆರವಿಲಾಗುವೆವೆನುತ ಲಾದುಂ
ಬರವುವಿಪ್ಪಲವೆಸೆದವು ೬

ಲಕುಮಿಗರಮನೆ ಲೋಕಬಾಂಧವ
ಸಖನು ವಿಧಿಗೆ ನಿಜಾಸನಾ
ಧಿಕ ಮನೋಜಗೆ ಬಾಣ ಪರಮಾ
ತ್ಮಕನ ನಾಭಿನಿವೇಶನಾ
ಶಕುತಿಯಿರಲೆಮ್ಮವನು ಸತಿಯು ಕು
ಚಕೆ ಸಮನವೆಂದೆಣಿಪರು
ಮುಕುಳಮಾಗದೆ ವನದೊಳನುದಿನ
ವಿಕಚಪದ್ಮಗಳುಳ್ಳವು ೭

ಅಳಿಯಗುಣದವನಳಿಯಲವನಾ
ಒಲುಮೆಯುಳ್ಳ ಹಯಂಗಳು
ತೊಳಲಿ ಬಳಲುತ ನಾಥರಿಲ್ಲದೆ
ಬಳಿಗೆಬರೆ ಬಹುವ್ಯಥೆಯಲಿ
ಗೆಳೆಯರಿಗೆ ಇಂತಳಲು ಬಂದಿತೆ
ಇಳೆಯೊಳೆಂದತಿ ಬೇಗಲು
ಗಿಳಿಗಳನು ಸಂತೈಪ ಮಾವಿನ
ಮರಗಳಿರ್ದವನೇಕವು ೮

ಝುಂಪೆ:—

ಇಂತಿರುವ ವನದೊಳಾನಂತ ಮೂರುತಿ ಗೋಪ
ಸಂತತಿಯ ನೊಡಗೊಂಡು ಸಂತೋಷದಿಂದ ೧
ಪಶುಗಳಿಗೆ ರುಚಿಯಾದ ಹಸಿಯ ತೃಣಗಳ ಬಳಿಯ
ಹಸನಾಗಿ ಚರಿಸಿದರು ಹಸಿದ ಧೇನುಗಳ ೨
ಕೃಷ್ಣಮೂರ್ತಿಯ ಮುದದಿದಿಟ್ಟಿಸುತ ಗೋವ್ರಗಳು
ಇಷ್ಟವಹ ತೃಣದಿಂದ ಪುಷ್ಟಿಯನೆ ಪಡೆದು ೩
ಹಸಿವು ಪರಿಹರವಾಗಿ ಪಶುಗಳೆಲ್ಲವು ಬಹಳ
ತೃಷೆಗೊಂಡು ಬೇಸಿಗೆಯ ಬಿಸಿಲಿಂದ ಬಳಲಿ ೪
ಹುಡುಕುತಲಿ ಜಲವ ನೀರಡಿಸಿ ಗೊಲ್ಲರು ಗೋವ್ರ
ಳೊಡನೆ ಕಾಳಿಂಗನಿಹ ಮಡುವ ಸಾರಿದರು ೫

ಕಂದ:—

ಮುಂದಿರ್ದ ಗೋಪ ಬಾಲರು
ಮುಂದಿರ್ದ ಪಶು ವ್ರಜಂಗಳ್ ಬಂದರು ಕಾ
ಳಿಂದಿಗೆ ಕೆಲ ಪಶುಗಳ ಸಹ
ಹಿಂದಿರ್ದನು ಶ್ರೀಮುಕುಂದ ಇಂದುಕುಲೇಶಾ

ವಚನ:—

ಇಂತು ಗೋಪಾಲರು ಬಂದು ನೋಡುತ್ತಿರಲಾ ಮಡುವೆಂತಿರ್ದು

ದೆನೆ.—

ಅಟ್ಟತಾಳ:—

ಕುಟಿಲಚಿತ್ತನ ವಚನದಂದದಿ ಕುಶಲವಾಗಿ ವಿಪುಲ
ಸ್ಫುಟದಿ ಕಂಗೊಳಿಸಿತ್ತು ನೋಟಕೆ ಸುಂದರದಲಿ ೧
ಬಣ್ಣಗಾಜಿನ ಮಣಿಯ ರತುನವು ಪೊಳೆವ ತೆರೆದಿ ಉದಕವು
ಕಣ್ಣಿಗತಿ ನಿರ್ಮಲದಿ ಶೀತಳಕರದಿ ಪೊಳೆಯೆ ೨
ರಂಜಿಸುತಲಿಹ ಕಳ್ಳ ಹೊನ್ನಿನ ಲಕ್ಷಣದೊಳು ಪರಿಮಳ
ಕುಂಜಪುಂಜಗಳೂರ್ಮಿಮಯದಿಂ ಪೂಜ್ಯಮಾಗೆ ೩
ಇಂದ್ರಜಾಲ ಮಹೇಂದ್ರಜಾಲ ವಿದ್ಯದಂತೆ, ನೋಡಲು
ಸಾಂದ್ರಮಾಗಿಹ ಜಲಚರಂಗಳ ಚಯಗಳೆಸೆಯೆ ೪
ಭಾಮೆಯರ ಹೃದಯವನು ತಿಳಿಯದ ಭಾವದಂತೆ ಮಡುವಿನ
ರಾಮಣೀಯತೆ ತಿಳಿಯದಾ ಗೊಲ್ಲರು ಪಶುಗಳು ೫

ಕಂದ:—

ವಿಷವಮೃತವೆಂದು ಕವಿಗಳು
ಪೆಸರಿಟ್ಟರು ನೀರಿಗಮೃತ ಪುಸಿಯಾದುದು ತ
ದ್ವಿಷಶಬ್ದ ಸತ್ಯಮಾದುದು
ವಿಷೋದಕಮಾದುದು ಸರಸ್ಸು ವಿಧಿಸಲು ನೃಪತೀ

ಚಂಪಕಮಾಲಾವೃತ್ತ:—

ವಿಷಜಲವಾಗಲಿಕ್ಕದರವೀಚಿಯ ಸೋಕಿದ ವಾಯುವಿಂದಲಾ
ಗಸದಲಿ ಪೋಪ ಪಕ್ಷಿಗಳು ಕಾರಿ ವಿಷಂಗಳು ಬೀಳುತಿರ್ದುವಾ
ವಿಷದಲಿ ತತ್ಸರೋತಟದ ವೃಕ್ಷಗಳೆಲ್ಲುರಿಗೊಂಡು ನಿಂತಿರಲ್
ವಿಷಧರನನ್ನಿವಾರರಿಗೆ ವಿಘ್ನಗಳುಂಟೆ ವಿಷಪ್ರಭೇದದೊಳ್

ವಚನ:—

ಇಂತು ಕಾಳಿಂಗನಾಗರ ಮಡುವಿನೊಳಿರ್ದ ವಿಷೋದಕಮಂ ಪಾನಮಂ ಮಾಡಿ ಗೋವುಗಳೂ ಗೋಪಾಲಕರೂ ಸಹ ಗತಪ್ರಾಣರಾಗಿ ದೇಹಂಗಳಂ ಮರೆದೊರಗಲು ಹತಶೇಷರಾದರ್ಭಕರಿಂದೀವಾರ್ತೆಯಂ ಶ್ರೀ ಕೃಷ್ಣನು

ಕೇಳಿ ಘಳಿಲನೆ ಸರೋವರಮಂ ಸಾರ್ದು ಮೂರ್ಛಾಕ್ರಾಂತರಾದ ಗೋವುಗಳಂ ಗೋಪಾಲರಂ ಕರುಣಾಕಟಾಕ್ಷದಿಂದೀಕ್ಷಿಸಲು ನಸುನಗುತ ನಿದ್ರೆಯಂ ತಿಳಿದೇಳ್ವರಂತೆ ಪಶು-ಪಶುಪಾಲರೆದ್ದುದಂ ನಿರೀಕ್ಷಿಸಿ ಸಂತೋಷಚಿತ್ತನಾದ ಭಗವಂತನೋರ್ವ ಸಖನೊಳೀನೆನ್ನುತಿರ್ದನು.—

ತ್ರಿಪದಿ:—

ಅಣ್ಣ ಕೇಳೀ ಮಡುವು ನೋಡಲು
ಕಣ್ಣಿಗಿಂಪಾಗಿಹುದು ಮುಷ್ಟಿಯ
ಹಣ್ಣಿನಂದದಿ ಸೇವ್ಯವಲ್ಲಿದು ಬಣ್ಣಿಸುವರೆ ೧

ಕೆಟ್ಟ ಜಲಚರನಿರುವ ಕಾರಣ
ಮುಟ್ಟಲಾಗದು ಜಲವನಿದನಾ
ಮೆಟ್ಟದಲ್ಲದೆ ಯೋಗ್ಯವಾಗದು ಮುಟ್ಟಸವಿಯೆ ೨

ದುಷ್ಟರನು ಶಿಕ್ಷಿಸಲು ಧರೆಯಲಿ
ಶಿಷ್ಟರನು ರಕ್ಷಿಸಲು ಎಮ್ಮಯ
ಸೃಷ್ಟಿ ಕಾರಣವೈಸೆ ಎಮಗಿದು ಕಷ್ಟವುಂಟೆ ೩

ಧರೆಯ ಜೀವರ ಬಾಧೆಗೊಳಿಸುವ
ಉರಿವ ವಿಷಮಡುವಿನಲಿ ಇಹಜಲ
ಚರನ ಪೊರಡಿಸಿ ಜಲವನಮೃತಕೆ ಸರಿಯೆನಿಸುವೆ ೪

ಸರಸಿಜಾಸನ ರುದ್ರ ಇಂದ್ರಾ
ದ್ಯರಿಗಭೇದ್ಯವು ಘೋರತರ ಜಲ
ಚರನ ಪೊರಡಿಸಲಿತರರಳನೇ ಪರಿಕಿಸುವಡೆ ೫

ವಚನ:—

ಇಂತು ಭಗವಂತನು ಯೋಚಿಸಿ ಜಲಚರನ ಹೊರಡಿಸದಲ್ಲದೆ ಇತರ ಪ್ರಾಣಿಗಳಿಗೆ ಸೌಖ್ಯವಿಲ್ಲೆಂದು ಲೋಕೋಪಕಾರ ಧುರೀಣನಾಗಿ ದಯಾಸಮುದ್ರನಾಗಿ ಶ್ರೀ ಹರಿಯೇನುಮಾಡಿದನೆಂತೆನೆ.—

ರಾಗ ಪಂತುವರಾಳಿ ರೂಪಕತಾಳ

ಮಡುವು ಧುಮುಕಿದ ರಂಗ ಮಡುವ ಕಲಕಿದ　　ಪ.

ಕದಂಬದ ಮರನೇರಿ ಕಾಲ। ಕಡಗ ಗೆಜ್ಜೆ ಘಲ್ಲು ಘಲ್ಲೆನೆ　　ಅ.

ಬಟ್ಟ ಮುತ್ತಿನ ಹಾರಪದಕ
ವಿಟ್ಟು ಕಡಗ ಬಾಹುಪುರಿಯ
ನೆಟ್ಟನೆ ಸವರಿಸುತ ಜಗ
ಜಟ್ಟಿಯಂತೆ ಭುಜವನೊದರಿ　　೧

ಉಟ್ಟ ಪೀತವಸನ ನೆರಿಯು
ಇಟ್ಟ ಕನಕರಶನ ಬಂಧದಿ
ಧಿಟ್ಟನಾಗಿ ನೀಲಮಣಿಯ
ಪುಟ್ಟ ಚೆಂಡು ಹಾರುವಂತೆ　　೨

ಮುಟ್ಟಲಮ್ಮದ ಕಾಳಿಂಗನ್ನ
ಕುಟ್ಟಿ ಕಾಲಿಲೊದೆವೆನೆಂದು
ಭಟ್ಟರು ಪೊಗಳುವಂತೆ ಉಡಿಯ
ಕಟ್ಟಿದ ಘಂಟೆ ಘಣಘಣರೆನೆ　　೩

ಲಂಡತನದ ದಿಂಡುಗೆಡಹಿ
ತೊಂಡನಮಾಡಿಕೊಂಡು ಬಿಡುವೊ
ಗಂಡುಗಲಿಯೆಂತೆಂಬ ತೆರದಿ
ಗಂಡುಪೆಂಡ್ಯ ಡಂಢಣರೆನೆ　　೪

ಚೆಂದದಿಂದ ನಾರದಾದ್ಯ
ರಂದವಾದ ರಂಭಾದಿಗಳು
ನಿಂದು ನುತಿಸಿ ನಟಿಸೆದೇವ
ದುಂದುಭಿಗಳು ದಂಧಣರೆನೆ　　೫

ಕ್ಷಯರಹಿತ ದಯಾಸಮುದ್ರ
ಭಯನಿವಾರಣ ಭಕ್ತಲೋಕ
ಪ್ರಿಯನೀನೆಂದು ಬೊಮ್ಮಾದಿಗಳು
ಜಯಜಯತು ಉಘೇಯೆನಲು ೬

ಗರುಡ ಕಿನ್ನರ ಕಿಂಪುರುಷ
ವರವಧೂ ಜನಗಳರಸಿ
ವರಖಾದ್ರಿ ನೃಹರಿಶಿರದಿ
ಅರಳು ಮಲ್ಲಿಗೆ ಮಳೆಯ ಕರೆಯೆ ೭

ಕಂದ:—

ಇಂದುವಿನರಿಯದ ಕಂಗಳ
ರಂದದಿ ಹರಿಮಹಿಮೆಯಿಂತೆ ಯಜ್ಞದ ಮಡುವಂ
ನಂದಾರ್ಭಕ ಪೊಗಲಾಕ್ಷಣ
ದಿಂದಿರದೋಡಿದರು ಭೀತಿಯಿಂದಹಿಪತಿಯಂ

ದ್ವಿಪದಿ:—

ವಿಷ್ಣುಪಾದೋನ್ನತವೆಸೆವ ಭೂರುಹವ
ಕೃಷ್ಣ ನಡೆದುರ್ರೋಚಿಷ್ಣು ರೂಪದಲಿ ೧
ಗಂಡುಗಲಿಗಳದೇವ ದಂಡೆಯುನ್ನೊದರಿ
ಕೊಂಡು ಬೊಬ್ಬಿರಿದು ದೋರ್ದಂಡನುಂ ನೆಗಹಿ ೨
ಕುಣಿದು ಚಪ್ಪಾಳಿಟ್ಟು ಮಣಿದು ದೇಹವನು
ಪ್ರಣುತಿಸಲ್ ಸುರರೆಲ್ಲ ಫಣಿಯುಳ್ಳ ಮಡುವ ೩
ಧುಮುಕಿದಾ ಭರದೊಳಾ ದುರ್ವಿಷೋದಕವು
ಕ್ರಮುಗೆಟ್ಟು ನೂರುಬಿಲ್ಲಂತರದಲುಕ್ಕಿ ೪
ಘೋರನಿರ್ಘೋಷದಿಂ ಕುದಿ ಕುದಿದು ಜಡಿದು
ಭೋರೆಂದು ಮೊರೆಯೆ ನಭೋಚರರು ಬೆದರೆ ೫
ಕಾರಿದನು ಉರಗೇಂದ್ರಕನಲಿ ಕಾಲಾಗ್ನಿ
ಸಾರವಹ ವಿಷವ ದುರ್ವಾರ ಭೀಕರದಿ ೬

ಭುವನ ಸಂಹರದಂತೆ ವಿಷಾಗ್ನಿಧೂಮ
ಭುವನ ಜನಂಗಳಂ ಬೆದರಿಸಲ್ ಬಹಳ ೭
ಭಯವಾದ ಮಡುವಿನೊಳ್ ಭದ್ರೇಭದಂತೆ
ಭಯನಿವಾರಕನುಭಯಬಾಹುಗಳನೆತ್ತಿ ೮
ಹೊಡೆವುತ್ತಲಡಿಗಡಿಗೆ ತುಡುಕಿ ಕುಲುಕುತ್ತ
ಜಡಿದು ಮಂದರದಂತೆ ಹೊಡೆದು ಕಾಲ್ಗಳಲಿ ೯
ಮುಣುಗುತ್ತಲೇಳುತ್ತ ಮೊರೆದು ಹಾರುತ್ತ
ಫಣಿಯೆತ್ತ ವಿಷವೆತ್ತಲೆನುತ ಚರಿಸುತ್ತ ೧೦
ಚೆಂಡಂತೆ ಪುಟನೆಗೆದು ದಿಂಡುರುಳಿ ಹಾಯ್ದು
ಚೆಂಡಂತೆ ತೇಲುತ್ತ ಅಂಡಲೆವುತ್ತ ೧೧
ಅಂಡಜದಂತೆ ದೋರ್ದಂಡದೊಳ್ ಬಿಗಿದು
ಮಂಡಲಾಕೃತಿಯ ಮುಂಕೊಂಡು ಈಜುತ್ತ ೧೨
ಸುತ್ತಿ ಸುಳಿಯುತಲಿರಲಿದೆತ್ತಣ ರಭಸ
ವೆತ್ತವಾಯ್ತೆಂಬುತ್ತ ಮತ್ತಾ ಫಣೀಂದ್ರ ೧೩
ಕಂಡು ಲಾಲಿಸಿ ಹೇಳಲಾರೌದ್ರರವವ
ಕಂಡು ಮಹಾದ್ಭುತವ ತಾಳಿದನಾಗ ೧೪

ವಚನ:—

ಇಂತು ಶ್ರೀಕೃಷ್ಣನು ಕ್ರೀಡಿಸುತ್ತಿರುವುದಂ ಕಂಡು ಕುಂಡಲೀಂದ್ರನು ತನ್ನೊಳು ತಾನೇನ್ನುತಿರ್ದನು.—

ತ್ರಿಪದಿ:—

ರಾಕ್ಷಸರು ಎನ್ನಯ ಭವನವ ನಿ
ರೀಕ್ಷಿಸಲಯೋಗ್ಯರವರಾ ಸಹ
ಸ್ರಾಕ್ಷಮುಖ್ಯರು ನಡುಗುವರು ಕಡುರೂಕ್ಷಗೊಳುತ ೧

ಫಣ ಸಹಸ್ರಗಳುಳ್ಳ ಫಣಿಪತಿ
ಗಣನೆಯಿಲ್ಲವಸಾಧ್ಯವಾತಗೆ
ಬಣಗುಗಳು ದಿಕ್ಪಾಲರಾದರು ಸೆಣಸುವುದಕೆ ೨

ಮಿಕ್ಕ ಮನುಜಾಧಮರು ಕನಸಿಲಿ
ಪೊಕ್ಕು ಪೊರಡುವರುಂಟೆ ವಿಷದಿಂ
ದುಕ್ಕಿ ಸೊಕ್ಕುವ ಎನ್ನ ಭವನವ ನಕ್ಕರಿಂದ ೩

ಹಸಿದ ಸಿಂಹವ ಕೆಣಕಿ ಕೆಡುತಿಹ
ಶಶದ ಶಿಶುವಂದದಲದಾರೋ
ಘಸಣೆಗೊಳಿಸುತ ರಭಸವೆಸೆದರು ನುಸಿಗಳಂತೆ ೪

ಎಂದೆನುತ ಕೋಪಾನಲಾಕ್ಷಿಗ
ಳಿಂದ ವಿಷಪೂತ್ಕಾರ ಭರಿತದಿ
ಬಂದು ನೋಡಿದನಂದು ಶ್ರೀಗೋವಿಂದ ನಿರವ ೫

ಝಂಪೆ:—

ಕ್ಷೀರಸಾಗರದಲಿ ವಿಹಾರಿಸುವ ಪರಬೊಮ್ಮ
ಘೋರತರವಾದ ವಿಷವಾರಿ ಕೇಳಿಯಲಿ ೧

ಇರಲು ಕಂಡನು ವಜ್ರವರ ಪತಾಕಾಂಕುಶದ
ಸರಸಿರುಹ ರೇಖೆಗಳ ಚರಣ ತಲಗಳಲಿ ೨

ವೀರನಾದರ್ಭಕನಿದಾರೆಂದು ಮುಳಿದು ಕಾ
ಳೋರಗನು ಸಾರಿದನು ಚಾರು ಮೂರುತಿಯು ೩

ಏಕತಾಳ:—

ಕಂಡನು ಫಣಿಪತಿ ಲಂಡತನವನ್ನು
ದ್ದಂಡದಿ ಮಡುವ ಚಂಡ ಬಾಲಕನ ೧

ಉರಿಯನು ಸೋಲಿಪ ಗರಳವನುಗುಳುತ
ಗುರುತರ ನೇತ್ರದಿ ಮೊರೆವುತ್ತ ನೋಡಿ ೨

ಬಂದನುರಿದು ನೂರೊಂದು ಮುಖವಿ ಗೋ
ವಿಂದನ ಸುತ್ತಿದನೊಂದೆನಿಮಿಷದಿ ೩

ಸುತ್ತಿದ ದೇಹದಿ ಅತ್ತಿತ್ತ ತೊಲಗದೆ
ಒತ್ತಿ ಬಿಗಿದ ಬಿಗಿದತ್ತಲಣುಗನ ೪
ಸಿಕ್ಕಿಸಿಕೊಂಡರೆ ವೆಕ್ಕಸದೇಹದಿ
ತೆಕ್ಕೆಯೊಳಗೆಪುದಿವಿಕ್ಕಿ ಬೊಬ್ಬಿರಿದ ೫
ತೋರಿದ ತನ್ನಯ ಘೋರ ವಿಷಾಗ್ನಿಯ
ಸಾರತರದ ದುಷ್ಪೂರದ ಬಗೆಯ ೬
ಭೀಮಕರೋಗ್ರದ ಧಾಮವೆನಿಪ ವಿಷ
ಧೂಮವ ತೋರಿದ ಸಾಮರ್ಥ್ಯಗಳ ೭
ವಿಷದಿಂದಾಗುವ ವಿಷಮ ಭಯಂಗಳ
ವಿಷಮುಖ ತೋರಿದ ವಿಷಧರನುತಗೆ ೮
ಕುಂಡಲಿಶಯನನ ಕುಂಡಲೀಂದ್ರನು ಪಿಡಿ
ಕೊಂಡು ತಾ ಮುಳುಗಿಸಿಕೊಂಡೊಳಹೊಕ್ಕ ೯

ಸೀಸಪದ್ಯ:—

ವಿಷಜಿತಾಂಡಜರಾಟ್ಸು ವಿಮಲ ಕಂಠೋಪರಿ
ಸಂಸ್ಥಿತಗಮನದೊಳ್ ಚತುರನಾದ
ವಿಷಧರಾನ್ವಯರಾಜ ವಿಮಲಸನ್ಮೃದುದೇಹ
ಪರ್ಯಂಕರಾಪೇಕ್ಷ ಪಾತ್ರನಾದ
ವಿಷಪೂರಿತಸ್ತನೀ ವಿವಿಧ ವಿದ್ಯೋಪಾಯ
ಕಲಿತ ಜೀವಾಶುಗಾಕರುಷನಾದ
ವಿಷಕಂಠ ಜಿಹ್ವಾಗ್ರವಿನುತಾಮೃತಾಧಾರ
ದಾಯಕ ಶುಭನಾಮಧೇಯನಾದ
ವಿಷಲಸದ್ರೂಪ ಕಾಮಿನೀವೃಂದಭವ್ಯ
ಗುರುಪಯೋಧರ ಕಸ್ತೂರಿ ಕುಂಕುಮಾಂಕ
ಚಾರುವಕ್ಷಸ್ಥಲದಮೇಲೆ ಶಯನನಾದ
ವಿಷ್ಣು ಕೃಷ್ಣಂಗೆ ವಿಷದಿಂದ ವಿಷಮವುಂಟೆ

ತ್ರಿಪದಿ:—

ನಡುವಿನೊಳು ಫಣಿಬಂಧದೊಳಗಾ
ಕಡಲತಲ್ಪನು ಮುಣುಗೆಕಾಣದೆ
ತಡಿಯಲಿಹ ಗೋಪಾಲಬಾಲರು ಪಿಡಿದು ವ್ಯಥೆಯ ೧

ದಾನವಾಂತಕ ಕೃಷ್ಣಮೂರುತಿ
ಏನಿದೇನಾದನೊ ಮಡುವಲಿ
ನ್ನೇನು ಮಾಡುವೆನೆನುತ ಕಡುದುಮ್ಮಾನಗೊಳುತ ೨

ಕಾಣದಾದೆವು ಸಾವು ನಮ್ಮಯ
ಪ್ರಾಣನಾಥನನೆನುತ ವಿಗತ
ಕ್ಷೇಮದಿಂದಲಿ ಮೂರ್ಛೆಯೊಡೆದರು ಮಾಣದಾಗ ೩

ಬಳಿಕಸಪ್ರಾಣಿಸುತ ಬಾಲಕ
ರಳಲುತಲಿ ಚಿತ್ತರದ ಪ್ರತಿಮೆಯ
ಚೆಲುವಿನಂತೀಕ್ಷಿಸುತಲಿರ್ದರು ಬಳಿಕ ಮಡುವ ೪

ಇತ್ತಲೀಪರಿಯಾಗೆ ಗೋಕುಲ
ದತ್ತಲಾಯುತ್ಪಾತಗಳು ಬಹು
ವೊತ್ತದಿಂದಲಿ ಜನರಿಗಾದುದು ಚಿತ್ತಚಲನೆ ೧೪

ಕಂದ:—

ಪೊಡವಿಗಡಗಡೆ ನಡುಗ
ಲುಡುರಾಜಿಗಳುದುರೆಸೂರ್ಯ ಮುಲಿನಂಬಡೆಯಲ್
ಕಡುರಕ್ತಧಾರೆವರುಷಿಸೆ
ಕಡಲೇಳ್ಕಲಕಾಡೆ ಕಾಲಕಡೆಯೆನೆ ತೋರಲ್

ವಚನ:—

ಇಂತಾದುತ್ಪಾತಕಂಗಳಂ ನೋಡಿ ಗೋಕುಲನಿವಾಸಿಗಳಾದ ನಂದ ಗೋಪಯಶೋದಾದಿ ಗೋಪಾಲ ಗೋಪಾಂಗನೆಯರು ಚಿಂತಾಕ್ರಾಂತರಾಗಿ ಏನುಮಾಡಿದರೆಂತೆನೆ.—

ದ್ವಿಪದಿ:—

ಏನಿದೇನಾಶ್ಚರ್ಯವೆಂದೆಂದಿಗಿನಿತು
ಕಾಣದುತ್ಪಾತಗಳ್ ನಾನಾ ವಿಧದಲಿ ೧
ತೋರುವುವದರಿಂದ ಯಾರಿಗೇನಹುದೋ
ಸಾರವಿರಹಿತದ ದುಶ್ಶಕುನಂಗಳಿಂದ ೨
ಬೇರೆ ರಾಮನನುಳಿದು ಘೋರಾಟವಿಯಲಿ
ಸಾರಿದರಂತೆ ತುರುಗಾರರಂ ಕೂಡಿ ೩
ಕೃಷ್ಣನೇನಾದನೋ ಕೃಷ್ಣನೆಂತಿಹನೊ
ಕೃಷ್ಣಗೇನಾಯಿತೋ ಕೃಷ್ಣನೆಲ್ಲಿಹನೊ ೪
ಹಾಯೆನುತ್ತಳಲುತ್ತ ಹಂಬಲಿಸುತ್ತ
ಬಾಯಾರುತಲಿ ಗತಪ್ರಾಣರಾದಂತೆ ೫
ಬಾಲಕರ್ಯುವ್ವನ ಪರಮವೃದ್ಧಾದಿ
ಜಾಲವೆಲ್ಲವು ತಮ್ಮ ಸದನಗಳ ಪೊರಟು ೬
ಕಳವಳಿಸುತ್ತ ಗಡಗಡನೆ ನಡುಗುತ್ತ
ಪೊಳಲ ಬಾಹ್ಯವಸಾರಿ ಬೃಂದಾವನಾಖ್ಯ ೭
ವನಕಭಿಮುಖರಾಗಿ ಘನಪಶುವ್ರಜದ
ಪಿನಿತು ಹೆಜ್ಜೆಯಲಿರುವ ಕುರುಹುಗಳ ಪಿಡಿದು ೮
ನಂದಾದಿ ಸಂದೋಹವೆಲ್ಲ ಗೋವಿಂದ
ನನ್ನೋಡಲೋಡಿ ಮೈನೊಂದು ನುಗ್ಗಾಗಿ ೯
ಬೀಳುತ್ತಲೇಳುತ್ತ ಬೆದರಿ ಮನನೊಂದು
ಕಾಲುಗಳಿಳಿವುತ್ತ ಕಡುಕಷ್ಟಪಡುತ ೧೦
ಉರಗನಟ್ಟುಳಿಯೊ ಕಾಡುರಿಯೊ ಜಂಗುಳಿಯೊ
ಹರಿಯುಬಾಧೆಗಳೊ ಸಿಂಧುರದವೇಧೆಗಳೊ ೧೧
ನರರಿಂದಜಯವೊ ಕಿನ್ನರರಿಂದಭಯವೊ
ಸುರರಿಂದತೊಡಕೊ ಭೂಸುರರಿಂದಮುಡುಕೊ ೧೨
ಆರಿಂದಲೇನಾಯ್ತೊ ಅರಿಯೆವಾವಿಂದು
ಮಾರನಂಪೋಲ್ವ ಸುಕುಮಾರನೆಂತಿಹನೊ ೧೩

ಎಂದೀಪ್ರಕಾರದಿಂ ನಂದಗೋಪಾದಿ
ವೃಂದವೆಲ್ಲವು ಬಹಳ ಸಂದೇಹಗೊಳುತ ೧೪
ಅಳಲುತ್ತ ಬಳಲುತ್ತ ತೊಳಲಿ ಬಳಲುತ್ತ
ಕಳವಳಿಸಿಯಾ ವಿಪಿನದೊಳಗಿಪ್ಪ ಜೀವ ೧೫
ಜಡರಾಶಿಗಳನೋಡೆ ಕಡುದೈನ್ಯಗೊಳುತ
ನುಡಿಸಿಕೇಳುವೆವೆಂದು ನುಡಿದರಾಗವರು ೧೬

ರಾಗ ಸೌರಾಷ್ಟ್ರ ಅಟತಾಳ

ಕೃಷ್ಣನಕಾಣಿರೆ ಗೋಪಾಲಕೃಷ್ಣನಕಾಣಿರೆ ಪ.
ಕೃಷ್ಣನೆಂಬುವ ಸಾಕ್ಷಾದ್ವಿಷ್ಣುರೂಪನ ಅ.

ಕುಜವೆನೀಕಾಣೆಯ ಕುಜನಸಂಹಾರಕನ
ಭುಜಗನೀಕಂಡೆಯ ಭುಜಗೇಂದ್ರಶಯನನ
ದ್ವಿಜವೆನೀವೀಕ್ಷಿಸೆ ದ್ವಿಜಕುಲೋತ್ತಂಸನ
ಭುಜದಿಗಮನಿಪನ ಭುಜಚತುಷ್ಟಯನ ೧

ಪರಭೃತನೋಡೆಯ ಪರವಾಸುದೇವನ
ಶರಭನೀತೋರಿಸೆ ಶರಣರಪೊರೆವನ
ಸರಸುಗಳರಿಯಿರೆ ಸರಸಿಜನಾಭನ
ಹರಿಣನೀಬಲ್ಲೆಯ ಹರಿಣಾಂಕಮುಖನ ೨

ವಿದ್ರುಮತೋರೆಯ ವಿದ್ರುಮಾಧರನ ಮ
ಹಾದ್ರಿನಿರೀಕ್ಷಿಸೆ ಅದ್ರಿಯಪಿಡಿದವನ
ಭದ್ರೇಭವರದ ಸುಭದ್ರಾಗ್ರಜನಬಲ
ಭದ್ರಾನುಜಸಿರಿ ಖಾದ್ರಿನೃಹರಿಯ ೩

ವಚನ:—

ಇಂತು ಕಂಡಕಂಡವರಂ ಬೆಸಗೊಂಡು ಮುಂದೆ ಪೋಗುತ್ತ ಶ್ರೀ ಕೃಷ್ಣನ ಹೆಜ್ಜೆಗಳಂ ನೋಡಿ ತಮ್ಮೊಳು ತಾವೇನೆನ್ನುತಿರ್ದರು.

ರಾಗ ಪುನ್ನಾಗ ತೋಡಿ ಅಟತಾಳ

ಹೆಜ್ಜೆಗಳಿವೆ ನೋಡಿರೆ ರಂಗೈಯನ
ಹೆಜ್ಜೆಗಳಿವೆ ನೋಡಿರೆ ಪ.

ಹೆಜ್ಜೆಗಳಿವೆನೋಡಿ ಮೂಜ್ಜಗದೊಡೆಯನ
ಅಬ್ಜಾಂಕುಶಧ್ವಜ ವಜ್ರರೇಖೆಗಳುಳ್ಳ ಅ.

ಗಣನೆಯಿಲ್ಲದಘೇನು ಗಣಗಳನೊಳಗೊಂಡು
ಪ್ರಣುತಿಪ ಗೋಪಾಲರಣುಗರನೊಡಗೂಡಿ
ತೃಣರಾಶಿಯುಳ್ಳ ಧಾರುಣಿಯಲ್ಲಿ ಚರಿಸುತ್ತ
ಮಣಿಮು ದೇಹವನಿಲ್ಲಿ ಕುಣಿಕುಣಿದಾಡಿದ ೧

ಗಿಳಿಯಂತೆಕೂಗಿ ಕೋಗಿಲೆಯಂತೆಪಾಡಿ ಉ
ಜ್ವಲಹಂಸೆಯಂದದಿ ಕುಲುಕುತ್ತ ನಡೆಯುತ್ತ
ಅಳಿಯಂತೆಮೊರೆದು ಎರಳೆಯಂತೆ ಚಿಗಿದು ನ
ವಿಲು ಚೆಂದದಿಂದಿಲ್ಲಿ ನಲಿನಲಿದಾಡಿದ ೨

ಗರುಡಗಮನನೆಂಬ ಗರುವತನವಬಿಟ್ಟು
ತುರಗದಾಟವನಾಡಿ ತುರುಗಾವರಿಗೆಸೋತು
ತುರಗತಾನಾಗಿ ಅವರುಗಳ ಪೊತ್ತಿರ್ದ
ತಿರುಗಿತಿರುಗಿ ಇಲ್ಲಿ ಹರಿಹರಿದಾಡಿದ ೩

ಚೆಂಡು ಬುಗುರಿ ಗೋಲಿ ಗುಂಡು ಗಜ್ಜುಗ ಚಿಳ್ಳೆ
ದುಂಡುಮಲ್ಲಿಗೆಹೂವ ಕೊಂಡಾಡಿದಣಿದಸು
ಗೊಂಡು ಆಕಳಕರಕೊಂಡು ಪಾಲನು ಸವಿ
ದುಂಡು ಮಿಕ್ಕುದ ಚೆಲ್ಲಿ ಕೊಂಡಾಡಿ ಪೋಗಿರ್ಪ ೪

ಮರನೇರಿ ಧುಮುಕಿದ ಗುರುತು ಪಾದಗಳಿವು
ನೆರಳೊಳು ಮಲಗಿರ್ದ ಕುರುಹಿನಡಿಗಳಿವು
ಶರಣರು ಪೂಜಿಪ ಚರಣತಳಗಳಿವು
ಹರಿಯಾದ ಶ್ರೀ ಖಾದ್ರಿನರಹರಿ ಚರಿಸಿದ ೫

ಕಂದ:—

ಇಂತೆನುತ ಪರಮಪುರುಷನ
ಚಿಂತಿಸುತತದಂಘ್ರಿಯುಗಳಸಿಕತಾಮಯದೊಳ್
ಸಂತರಹ ಗೋಪಜನರಾ
ಗಿಂತುರು ಪೊರಳಿದರು ಪುಣ್ಯಮೆಂತುಟೊಗಣಿಸಲ್

ವಚನ:—

ಇಂತು ನಾನಾವಿಧವಾದ ಕುರುಹುಗಳಂ ನಿರೀಕ್ಷಿಸುತ್ತ ಕಾಳಿಂದಿ ಮಡುವಂ ಸಾರ್ದು ತತ್ತೀರದೊಳ್ ದೇವವಿರಹಿತಸಾದ ದೇವಾಲಯ ದಂತಿರ್ಪ ಗೋ ಗೋಪಾಲಸಮೂಹಮಂ ಕಂಡು ಅವರುಗಳಿಂದ ಪೂರ್ವ ವೃತ್ತಾಂತವಂ ಕೇಳಿ ಅತ್ಯುಗ್ರವಾದ ವ್ಯತ್ಯುವಿನ ವದನದಂತಿರ್ಪ ಮಡುವಂ ಹೆರಸಾರಿ ನೋಡುತಿರ್ದರದೆಂತೆನೆ.—

ಕಂದ:—

ಮಂಜಿನಮರೆಯಲಿ ಸೂರ್ಯನು
ರಂಜಿಪತೆರನಂತೆ ಭುಜಗರಾಡ್ಬಂಧನವಂ
ಅಂಜದೆ ಪರಿದಬ್ಜಾಕ್ಷನ
ನಂಜಿನ ಮಡುವಿನಲಿ ಕಂಡರಂಜುತಲೆಲ್ಲರ್

ದ್ವಿಪದಿ:—

ಗೋಪಗೋಪಿಯರೆಲ್ಲ ಗೋಪಾಲನಾದ
ಶ್ರೀಪತಿಯರೂಪ ಸಲ್ಲಾಪಗುಣಗಳನು ೧
ನೆನೆವುತ್ತಲಡಿಗಡಿಗೆ ನೆನೆದು ಕಂಬನಿಯು
ವನಧಿಯೊಳೋಲಾಡ್ಯವನ ದುಸ್ಥಿತಿಯು ೨
ಕಂಡು ಮೂರ್ಛಿತರಾಗಿ ಕಾಯಮಂ ಮರೆದು
ದಂಡದಂತೀಡ್ಯಾಡಿ ತನುಲತಾವಳಿಯು ೩
ಯಾಕೆ ಜೀವನಗಳಿನ್ನ್ಯಾಕೆ ವಿಭವಗಳು
ಗೋಕುಲವಿನ್ನ್ಯಾಕೆ ಕೃಷ್ಣವಿರಹಿತದಿ ೪
ವನಜವಿಲ್ಲದ ಸರೋವರದಂತೆ ರಸಿಕ
ಜನವಿಲ್ಲದ ಸಭಾಸ್ಥಳದಂತೆ ಪೂರ್ಣ ೫

ಚಂದ್ರನಿಲ್ಲದ ನಕ್ಷತ್ರಗಳ ತೆರದಿ
ಚಂದ್ರಾನನೆಯರಿರದ ಸಂಸಾರವಿಭವ ೬
ದಂದದಿ ನಾವು ಗೋವಿಂದನನ್ನಗಲಿ
ಒಂದರೆ ಘಳಿಗೆ ಜೀವವ ಪೊರೆಯಲಳವೆ ೭
ಅಸುರಾರಿಯೊಡನೆ ನಮ್ಮಸುಗಳಂ ಕಳುಹಿ
ವಸುಧೆಯ ಋಣವನಿವರ್ತಿಪುದುಚಿತ ೮
ಎಂದು ನಂದ ಯಶೋದೆ ಮುಂತಾದ ಗೋಪ
ವೃಂದವೆಲ್ಲವು ಕಂದಿ ಕುಂದಿ ಕಾಳಿಂದಿ ೯
ಮಡುವಿನೋಳ್ ಮುಣುಗಿರ್ದ ಕಡಲಪರ್ಯಂಕ
ದೊಡೆಯನಂ ಕಾಣುತ್ತ ಪುಡುಕುತ್ತಲಿರಲು ೧೦

ವಚನ:—

ಇಂತು ಗೋಪಸಮೂಹಂಗಳು ಹಂಬಲಿಸುತ್ತಿರುವುದಂ ಕಂಡು ಯಶೋದಾದೇವಿಯೀನೆನ್ನುತಿರ್ದಳು.—

ಕಂದ:—

ಕೃಷ್ಣಾ ಗೋವಿಂದ ಕೇಶವ
ಕೃಷ್ಣಾಂಬಕ ಪರಮಪುರುಷ ವಿಷ್ಣುಮುರಾರೇ
ಕೃಷ್ಣಾಭಿಮಾನರಕ್ಷಕ
ಕೃಷ್ಣಪ್ರಿಯ ಕರುಣಿಸೆನ್ನ ಕಂದ ಮುಕುಂದಾ

ರಾಗ ರೇಗುಪ್ತಿ ಅಟತಾಳ

ಯಾಕೆ ಮರೆತಿಹೆಯೋ ರಂಗೈಯ ನೀ
ನ್ಯಾಕೆ ಮರೆತಿಹೆಯೋ ಪ.
ಯಾಕೆ ಮರೆದಿಹೆ ನೀ ಕಾಳೋರಗನಿಂದ
ಯಾಕೆಬಂಧ ವಿವೇಕರರಸ ಅ.

ನಸುನಗುತಲಿ ನೋಡಲು ಪೂತನಿ ಬಂದು
ವಿಷದಮೊಲೆಯನೂಡಲು
ಅಸುರೆಯೆಂದರಿದು ನೀ ಮಿಸುಕಲೀಯದೆ ಪಿಡಿ
ದಸುಗಳ ಹೀರಿದ ಹಸನಾದ ಬುದ್ಧಿಯು ೧

ಆಕುಟಿಲರೂಪನಂತೆ ದನುಜನೊಬ್ಬ
ನಕಟ ಗೋಕುಲದಿ ಪಿಂತೆ
ವಿಕಟದಿಂ ಬರಲವ ಸಕುಟಿಲನೆಂತೆಂದು
ಶಕಟನಕೆಡಹಿದ ಪ್ರಕಟದ ಬುದ್ಧಿಯು ೨

ಜೀವಹಿಂಸೆಯಮಾಡಲು ಪೂರ್ವದಿ ಕಳ್ಳ
ದೇವವೈರಿಯು ಬರಲು
ಭಾವಿಸಿ ತಿಳಿದು ನೀನಾವಿವರವನು ತೃ
ಣಾವರ್ತನನು ಕೊಂದ ಕೋವಿದತ್ವಪ ನೀ ೩

ವನಜಾಕ್ಷ ಗೋವುಗಳು ಸಹಿತ ವೃಂದಾ
ವನದೊಳು ನೀನಿರಲು
ಘನಪಕ್ಷಿಯಾಗಿ ಬಕನು ಬರೆ ತಿಳಿದು ನೀ
ಹನನವಗೊಳಿಸಿದ ಚಿನುಮಯ ಶಕುತಿಯು ೪

ಪಶುವಿನಂದದಲಿಬಂದ ದೈತೇಯನ
ವಶವಾಗದೆ ಕಂದ
ಅಸಮಧೇನುಕನೆಂಬ ನಿಶಿಚರನುರೆ ಕೊಂದ
ಕುಶಲಶಿರೋಮಣಿ ಅಸಹಾಯ ಭುಜಬಲ ೫

ಕರುವಿನಂತಾಕೃತಿಯು ಧರಿಸಿಯೊಬ್ಬ
ಸುರವೈರಿ ಬರಲರಿಯು
ಪರಕುಮಾಡದೆವತ್ಸಾಸುರನೆಂಬ ದೈತ್ಯನ
ಹರಣವನೀಗಿದ ನೆರೆ ಜಾಣತನವ ನೀ ೬

ಸರಸಿಜಾಸನರುದ್ರರ ವರವನಾಂತ
ಹಿರಣ್ಯಕನೆಂಬ ಸುರ
ಸುರವ ಜಗೆದವನ ಕರುಳಮಾಲೆಯು ಕಂಠಾ
ಭರಣ ಭೂಷಿತನಾದ ನರಕಂಠೀರವ ನಾವು ೭

ಕಂದ:—

ಇತ್ಯಾದಿ ದೈತ್ಯವೀರರ
ಪ್ರತ್ಯಹಮೋಳ್ ಗೆಲಿದ ಶಕ್ತಿ ಪ್ರೌಢತ್ವವು ಇಂ
ದತ್ಯುಗ್ರವಾದ ಸರ್ಪನ
ಕೃತ್ಯಕೆ ವಶವಾಯ್ತೆ ಕೃಷ್ಣ ಕೃಷ್ಣ ಮುರಾರೇ
ಆ ದನುಜರಂದದಿಂ ಕಾ
ಕೋದರ ನಿನ್ನೀಗ ಪಿಡಿದ ಕೋಮಲತನು ವೆಂ
ತಾದುದೊ ಮುಖವೆಂತಿಹುದೋ
ನೀದೋರು ಕೃಷ್ಣ ಮುಕುಂದ ನೀರಜನಾಭಾ

ರಾಗ ಶ್ರೀರಾಗ ಆದಿತಾಳ

ಮೂರುತಿಯನು ತೋರಿಸೊ ರಂಗೈಯ ನಿನ್ನ
ಮೂರುತಿಯನು ತೋರಿಸೊ ಪ.

ಮೂರುತಿಯನೆ ತೋರೊ ಮಾರನೈಯನೆ ಸುಕು
ಮಾರ ಶೋಭಿತವಾದ ಚಾರುತರಾನಂದ ಅ.

ಸುಳಿಗುರುಳುಗಳಂದದಿ ಮುಕುಟರತ್ನಾ
ವಳಿಯದೀಧಿತಿ ಫಾಲದಿ
ಹೊಳೆವಚಂದನ ಹೊಸತಿಲಕ ಸುಸ್ಮಿತಮಧು
ಕಲಿತ ಮಂಜುಳಮುಖನಳಿನದಿಂ ಬೆಳಗುವ ೧

ತೊಳಪಕಂಗಳ ಥಾಳದಿ ಇಂದ್ರಾಯುಧ
ಪಳಿವ ಪುಬ್ಬಿನ ಭಾವದಿ
ವಿಲಸಿತ ರತುನ ಕುಂಡಲ ದರ್ಪಣ ಕಪೋ
ಲಲಸಿತದಂತಾವಳಿಯು ಮುತ್ತುಗಳುಳ್ಳ ೨

ಮೆರೆವ ಬಿಂಬಾಧರದ ಅರುಣಕಾಂತಿ
ಇರವ ಮೋರೆ ಚುಬುಕ
ಕೊರಳ ಮೂರೇಖೆಯು ಸರದ ಕೌಸ್ತುಭ ಚಕ್ರಾಂ
ಬುರುಹ ಗದಾ ಶಂಖಕರಚತುಷ್ಟಯವುಳ್ಳ ೩

ತರುಣ ತುಳಸಿಮಾಲೆಯು ಪೇರುರದ ಮೇ
ಲಿರುತಿಹ ವನಮಾಲೆಯು
ಕಿರಿಡೊಳ್ಳು ಸುಳಿನಾಭಿ ವರಪೀತಾಂಬರ ಕಾಂಚಿ
ಕರಿಕರೋರುಗಳ ಸುಂದರದ ಜಂಘೆಗಳುಳ್ಳ ೪

ನಿರುಪಮ ಜಾನುಗಳ ಬೆರಳಸಾಲಿ
ನರುಣಾಬ್ಜ ಚರಣಂಗಳ
ಸುರಚಿರನಖ ಶುಭಕರ ರೇಖೆಗಳು ನಿಜ
ಶರಣರ ಪೊರೆವ ಖಾದಿರಿ ನರಹರಿ ನಿನ್ನ ೫

ಸೀಸಪದ್ಯ:—

ಶ್ರೀಮದ್ರಮಾಧೀಶ ಕೋಮಲಾಂಗಪರೇಶ
ಜಲಜಾಯತಾಕ್ಷ ವಿಶಾಲವಕ್ಷ
ದೂರ್ವಾದಳಶ್ಯಾಮ ಪೂರ್ವಾಮರವಿರಾಮ
ಸುಲೋಕಪಾಲ ಭಾಸುರಕಪೋಲ
ವೈಕುಂಠನಿಜಧಾಮ ಗೋಕುಲಾರ್ಣವಸೋಮ
ಖಗರಾಜಯಾನ ಪನ್ನಗಶಯಾನ
ಭವಬಂಧನವಿಹಾರ ಭಕ್ತಲೋಕೋದ್ಧಾರ
ಕುಂಜರ ಪರಿತೋಷ ಗೋಪವೇಷ
ಪರಮಪಾವನಗೋವಿಂದ ಹರಿಮುಕುಂದ
ತೋರುನಿನ್ನಶುಭಾಕಾರ ಮರಿತದೂರ
ಕಾಣದಿರಲಾರೆನಾ ನಿನ್ನಮಾಣದೆನ್ನ
ರಕ್ಷಿಸೈಇಂದುಬಂದು ಕಾರುಣ್ಯಸಿಂಧು

ಕಂದ:—

ಶಕ್ರನುತ ಮಡುವಿನಲಿ ಕರಿ
ನಕ್ರನಕೈ ಸಿಲುಕಿ ನಿನ್ನ ತುತಿಸಲು ದಯದೋಳ್
ಚಕ್ರದಿ ನಕ್ರನ ಗೆಲಿದ ತ್ರಿ
ವಿಕ್ರಮ ನಿನಗಿಂದು ಫಣಿಯ ವೇದನೆಯುಂಟೇ ೧

ಸಿಂಧುಶಯನ ಭಕ್ತರಭವ
ಬಂಧನವಂ ಪರಿಹರಿಸುವನೇ ದೀನಾಪ
ದ್ಬಂಧುವೆ ನಿನಗೀ ಉರಗನ
ಬಂಧನವೆಂತಾಯ್ತು ಎನ್ನ ಕಂದ ಮುಕುಂದಾ ೨

ಇಂತೆನುತ ಗೋಪಿ ಗೋಪಾ
ದ್ಯಂತರು ನೊರೆಯಿಡಲು ಕೇಳಿ ಚಿಂತಾಯಕನ
ತ್ಯಂತ ಕರುಣದಿಂದಲಿ ತಾ
ಸಂತೋಷಂಗೈಯಲವರ ಚಿಂತಿಸುತಿರ್ದಂ ೩

ದ್ವಿಪದಿ:—

ಸಕಲಜೀವಾತ್ಮಕ ಚೈತನ್ಯಮೂರ್ತಿ
ಸಕಲತತ್ವಾತ್ಮಕಾಪಾರ ಶರೀರ ೧
ನರರಂತೆ ನಾಟಕವನನುಸರಿಸುತ್ತ
ನಿರುಪಮೋಗ್ರಕರಾಳ ದುರಗ ಬಂಧನವ ೨
ಹರಿದು ಮೈಮುರಿದು ಚೇತರಿಸಿಕೊಂಡೇಳೆ
ಹರುಷದಿಂ ಸಕಲ ಗೋಪರಿಗೆ ಸಂತೋಷ ೩
ಪಸರಿಸೆ ಗೋವ್ರುಗಳ ಅಸುವಸಂತೈಸೆ
ಬಿಸರುಹಾಕ್ಷನ ನೋಡಿ ಆಸಮಾನಮೋದ ೪
ಭರಿತಮಾಗುತ್ತಿರಲು ಪರಮಾತ್ಮನಾಗ
ಗುರುತರಮೇಘದಿಂ ಪೊರಮಡುವ ಸೂರ್ಯ ೫
ಮಂಡಲದೆಂತೆಸೆಯೆ ಕಂಡು ಉರಗೇಂದ್ರ
ಚಂಡ ಕೋಪೋದ್ದಂಡ ಮಂಡನಾನ್ವಿತದಿ ೬
ನೂರೊಂದು ಮುಖಗಳಿನ್ನೂರೆರಡುಳ್ಳ
ಘೋರನೇತ್ರಗಳಿಂ ಭೋರು ಭೋರೆಂದು ೭
ಧಾರೆಯನ್ನೆರೆವಂತೆ ಸಾರವಿಷಾಗ್ನಿ
ಉರಿಯನ್ನುಗುಳಿ ಹರಿಯ ಕೆರಳಿ ನೋಡುತಲಿ ೮
ಬಿಡದೆ ಸಮ್ಮುಖನಾಗಿ ಘುಡಿಘುಡಿಸಿ ಜಡಿದು
ಪಡೆಗಳಿಂದಪ್ಪಳಿಸಿ ಹೊಡೆದು ಭುಸುಭುಸನೆ ೯

ಬರುವ ಕಾಳಿಂಗನಂ ಕೆರಳಿಸಿ ಬಿಡದೆ
ಹರಿದಾಡಿ ಬಳಲಿಸುತ ಹರಿಮುರಿದು ಚಿಗಿದು ೧೦
ತಪ್ಪಿಸಿಕೊಳುತಲಾ ಸರ್ಪಾಧಿಪಮುಖವ
ದರ್ಪದಿಂ ಚರಿಸೆ ಕಂದರ್ಪನ ಜನಕ ೧೧

ಎದ್ದರೊಡನೇಳುತ್ತನಿಲ್ಲೆ ತಾ ನಿಲುತ
ಬಿದ್ದರೆ ಜಲದಿ ತಾ ಬಿದ್ದರಸುತ್ತ ೧೨
ಏಳಲೇಳುತ್ತ ಹರಿ ಈಜೆಈಜುತ್ತ
ನೀಲವರ್ಣನು ಮುಳುಗೆ ನೆರೆಮುಳುಗುತ್ತ ೧೩
ಹರಿಯೆಂತುಚರಿಸಲಾಚರಿಸಿ ಕೋಪದಲಿ
ತಿರುತಿರುಗಿದಂಷ್ಟ್ರದೋಳ್ ಸುರಿವಗರಳವನು ೧೪
ಕಾರುತ್ತಲಮಿತ ದುರ್ವಾರಹೂಂಕಾರ
ಘೋರಾನಲಾಭೀಲ ಪೂರದುಷ್ಪೂರ ೧೫
ದುಸ್ಸಹವಿಷವೀರ್ಯ ದುರಿಭಡಾಳಿಸುತ
ನಿಸ್ಸಹನಿಶ್ಶೇಷ ನಿರ್ಘೋಷದಿಂದ ೧೬
ಅಟ್ಟಿ ಕೃಷ್ಣನ ಬೆನ್ನಟ್ಟಿ ಬೆನ್ನಟ್ಟಿ
ಕಟ್ಟಿ ಕಡೆತುಟ್ಟುತುದಿ ಮುಟ್ಟದೆ ಇರಲು ೧೭
ಬಳಲಿದನು ಉರಗೇಂದ್ರ ತನ್ನಲ್ಲಿ ಹರಿ ಸಿಗದಿ
ರಲು ಸರಸಿಜಭವ ರುದ್ರ ಪುರುಹೂತ ಯೋಗಿ ೧೮

ಜನಮುಖ್ಯರ ಸಮಾಧಿಗಿನಿತು ಗೋಚರಿಸ
ದನುಪಮ ಮಹಿಮನಂ ಚಿನುಮಯಾತ್ಮಕನಂ ೧೯
ಲಾಭವಿರಹಿತನಾಗಿ ರಾಗದಿಂ ಕುದಿದು
ಲೋಭಚಿತ್ತದಿ ಬಿಡಲೊಲ್ಲದೆ ದಣಿದು ೨೦

ನಿಟ್ಟುಸಿರ್ಗೊಳುತ ಕಣ್ಣಿಂದ ಮುಖದಿಂದ
ದಟ್ಟಾಗಿರುಧಿರಕಾರುತ್ತ ಕಡುಗುಂದಿ ೨೧
ಮಟ್ಟಾದ ವಿಷದಿಂದ ತುಟ್ಟುಗಿಸಿ ಶಕ್ತಿ
ಗೆಟ್ಟು ಬಸವಳಿದನಾ ದುಷ್ಟನಾಗೇಂದ್ರ ೨೨

ವಚನ:—

ಇಂತು ಬುಸುಗುಡುತ ನಾಗೇಂದ್ರನತ್ಯಂತ ಕೋಪಾಟೋಪದಿಂ ಶ್ರೀಕೃಷ್ಣನಂ ಪಿಡಿವೆನೆಂದು ಭೋಗಗೂಡಿಸಿ ಮೊರೆದು ನೂರೊಂದು ಮುಖಗಳಿಂದ ವಿಷಗಳಂ ಕಾರುತ್ತ ಅತಿ ತ್ವರಿತದಿಂ ಬರುವ ಫಣಿಪನಂ ಕಂಡು ಶ್ರೀಹರಿಯೇನುಮಾಡಿದನೆಂತೆನೆ.

ಝಂಪೆ:—

ಕರಿಯಮಸ್ತಕಕೆ ಕೇಸರಿಯೆರಗುವಂದದಲಿ
ಹರಿಯನ್ನುಪಿಡಿವ ವರಶರಭನಂತೆ ೧

ಉಂಡಶರಭನನು ಭೇರುಂಡ ಮುಸುಕುವತೆರದಿ
ಪುಂಡರೀಕನು ಹರಿಣಸಂಡಲಿವಪರಿಯ ೨

ಘನಕಪೋತನಶ್ಯೇನ ಕನಲಿತೊಡರುವ ರೀತಿ
ಫಣಿಯನಟ್ಟುವ ಸುಪರ್ಣನ ಚೆಂದವಾಗಿ ೩

ಭೀಮಬಲಕಾಳೀಯ ನಾಮಸರ್ಪನನೋಡಿ
ವ್ಯೋಮಕ್ಕೆಚಿಗಿದ ನಿಸ್ಸೀಮಲಾಘವದಿ ೪

ಧುಮುಕಿಭುಜಗನ ಶಿರವನಮುಕಿ ಚರಣಗಳಿಂದ
ಗಮುಕಿಸುತ ಒಡರಿದನು ಕಮಲಲೋಚನನು ೫

ತ್ರಿಪದಿ:—

ದಟ್ಟಡಿಗಳಿಂದನುಜಲೋಕಘ
ರಟ್ಟಫಣಿಪನ ಪೆಡೆಗಳಲುಗಲು
ಮೆಟ್ಟಿತುಳಿದನು ತಿಳಿದು ಪುನರಪಿ ಕುಟ್ಟಿಕೆಡಹಿ ೧

ಮೂರುಲೋಕವು ಕುಕ್ಷಿಯೊಳಗಿರೆ
ಭಾರವಿನ್ನೆಂತೆಂದು ಗಣಿಸಲು
ಧಾರುಣಿಯ ಪೊತ್ತಿರುವ ಶೇಷಗೆ ತೀರಲಳವೆ ೨

ಸೊಕ್ಕಿದುರಗನ ಪೆಡೆಯಮಣಿಗಳು
ದಿಕ್ಕಿಗೊಂದೊಂದಾಗಿ ಪರಿಯಲು
ರಕ್ಕಸಾಂತಕ ಜಡಿದುತುಳಿದನು ಕಕ್ಕಸದೊಳು ೩

ಒತ್ತಿತುಳಿಯುವ ಬಾಲಕೃಷ್ಣನ
ಸುತ್ತಿಕೆಡಹುವೆನೆನುತ ಬಾಲವ
ನೆತ್ತಿಬೀಸಲು ವಾಮಹಸ್ತದಿ ಎತ್ತಿಪಿಡಿದ ೪
ವಾಮಹಸ್ತದಿ ಪಿಡಿದುಪುಚ್ಛವ
ವಾಮಕಿತರದ ಹಸ್ತಕಾಂಚೀ
ದಾಮ ಭಾಗದೊಳಿಟ್ಟು ನಟಿಸಿದ ನಾಮುರಾರಿ ೫

ಕಂದ:—

ಲಕ್ಷ್ಮೀಶನಂಘ್ರಿತಲದಲಿ
ಲಕ್ಷಣದಿಂ ಪೊಳೆವ ರೇಖೆಗಳು ತಜ್ಜಾತೀ
ಲಕ್ಷಣಗಳು ತೋರುವಂದದಿ
ಶಿಕ್ಷಿಸಿದನು ಫಣಿಯ ವಿಭವ ಶಿರದೊಳಗೈಸೇ

ಸೀಸಪದ್ಯ:—

ಫಣಿಪರಾಡ್ಫನಗರ್ವಪರ್ವತ ಶೃಂಗಾಗ್ರ
ಭಾಗನಿರ್ಮಿತಖೇಲ ಭವನಗಳನು
ಭುಜಗೇಂದ್ರಮದಮತ್ತ ಗಜರಾಜಕುಂಭಸ್ಥ
ಲಸ್ಥಿತಮುಕ್ತಾಫಲ ವ್ರಜಗಳನ್ನು
ಕಾಳೀಯಬಲಪರಾಕ್ರಮ ಸಂಪದಾನೇಕ
ಲಕ್ಷಣದ್ವಿಚತುಷ್ಟಯಕ್ಷಗಳನು
ಅಹಿರಾಜಮುಖದಂಷ್ಟ್ರ ನಿಹಿತಹಾಲಾಹಲ
ಚಟುಲೋಗ್ರ ಕಟಕಾಸ್ತ್ರಭಟರುಗಳನು
ಕೆಡಹುತೀಡಾಡಿ ನಿಜಧಾಮದೆಡೆಯಮಾಡಿ
ಪೊರಡಲೀಸದೆ ಭಯಗೊಂಬ ತೆರನಗೈದ
ಕುಲಿಶಾಂಕುಶಧ್ವಜ ಜಲಜಪ್ರಸಿದ್ಧ
ರೇಖೆಗಳು ಕೃಷ್ಣನಂಘ್ರಿಯೊಳು ಶೋಭಿಸಿದವು

ರಾಗ ಮುಖಾರಿ ಆದಿತಾಳ

ಆಡಿದರಂಗ ಕುಣಿದಾಡಿದ
ಕಾಡಿದಕಾಳಿಂಗನ ಹೆಡೆಗಳ ತುಳಿತುಳಿದಾಡಿದ ಪ.

ಕಾಲಲಂದಿಗೆ ಗೆಜ್ಜೆ ಘಲ್ಲೆನೆ ಸರ್ಪ
ನಾಲಿಸಿ ಎದೆಗುಂದಿ ಝಲ್ಲೆನೆ ಲಕ್ಷ್ಮಿ
ಲೋಲ ವೇಣುನೂದುತನೆಲ್ಲನೆ ನಮ್ಮ
ಮೂಲೋಕದೊಡೆಯ ಶ್ರೀಬಾಲಗೋಪಾಲಕೃಷ್ಣ ೧

ಉಡಿಯಲಿರ್ದ ಘಂಟೆಘಣರೆನೆ ಕಾಲ
ಕಡಗಕಂಕಣವು ಝಣರೆನೆ ಸುರರು
ಹೊಡೆವ ದುಂದುಭಿಧಣರೆನೆ ಫಣಿಯು
ಹೆಡೆಯೊಳಿರ್ದ ರತ್ನಗಳುಡಿದು ಸಿಡಿಯುತ್ತಲಿರೆ ೨

ಕುಂಡಲವೆರಡುಥಳಾರೆನೆ ಚಂದ್ರ
ಮಂಡಲ ಮುಖವುಭಳಾರೆನೆ ಬ್ರಹ್ಮ
ಕಂಡುನುತಿಸುತ್ತಭಲಾರೆನೆ ಮದ
ಶುಂಡಾಲಕರ ಬಾಹುದಂಡಗಳನೆಗಹಿ ೩

ಬಡನಡು ಬಳುಕುತ್ತಬಾಗಲು ಅಹಿ
ತಡೆಯದೆ ದೈನ್ಯದಿಕೂಗಲು ಸರ್ವ
ಪೊಡವಿಗೆ ಶುಭಕರವಾಗಲು ಸ್ವಾಮಿ
ಬಿಡದೆ ದಟ್ಟಡಿಗಳಜಡಿದು ತದ್ಧಿಮಿಕೆಂದು ೪

ತುಂಬುರನಾರದರು ಪಾಡಲು ಜಾಣೆ
ರಂಭೆಊರ್ವಶಿಯರಲ್ಲಾಡಲು ಇಂದ್ರ
ನಂಬಕ ಸಾಸಿರದಿ ನೋಡಲು ಕೈಯ
ಕೊಂಬುಕೊಳಲು ಗೋವಡಿಂಬರು ಧ್ವನಿಗೈಯೆ ೫

ಭೃಂಗಿಪೇಳುವ ಗದ್ಯಪದ್ಯವು ಸನ್ಮ್ರ
ದಂಗ ಶಿವನಿಂದವಾದ್ಯವು ದಿವ್ಯ
ಸಂಗೀತ ಗಂಧರ್ವಚೋದ್ಯವು ನಮ್ಮ
ಅಂಗಜಪಿತ ಮೋಹನಾಂಗವಲ್ಲಾಡಿಸುತ ೬

ಅಷ್ಟದಿಕ್ಪಾಲಕರುಸ್ಸೈಯೆನೆ ಪುಷ್ಪ
ವೃಷ್ಟಿ ದೇವತೆಯರೊಯ್ಯನೆ ಕರೆಯೆ
ಸೃಷ್ಟಿಗೊಡೆಯ ಧೈಯಧೈಯೆನೆ ಬಾಲ
ಕೃಷ್ಣನಟಿಸೆ ಗೋಪರಷ್ಟುಸಂತುಷ್ಟರಾಗೆ ೭

ಜಯಜಯ ಮಾಧವಜನಾರ್ದನ ನಮೋ
ಜಯಜಯ ಸುರಕುಲವರ್ಧನ ಪಾಹಿ
ಜಯಜಯ ಕಾಳೀಯಮರ್ದನ ದೇವ
ಜಯಜಯವೆಂದು ದೇವಚಯವುಘೋಷಿಸೆ ೮

ವೇದಪರ್ವತಸರ್ವಂಸಹಾಧರ ಪ್ರ
ಹ್ಲಾದ ಬಲಿದ್ವಿಜಪಾಲರಾ-ಮಶ್ರೀ
ಯಾದವಬುದ್ಧ ಕಲ್ಕಿಯಾಕಾರ ವೊದ
ಲಾದನಂತಾವತಾರನಾದ ಖಾದ್ರಿನರಸಿಂಹ ೯

ವಚನ:—

ಈ ಪ್ರಕಾರದಿಂದ ಕಪಟನಾಟಕಸೂತ್ರಧಾರನಾದ ಶ್ರೀಕೃಷ್ಣಮೂರ್ತಿ ನಾಟ್ಯವನ್ನಾಡೆ ಬ್ರಹ್ಮಾದಿಗಳು ಸ್ತೋತ್ರವಂಮಾಡೆ ಶ್ರೀಹರಿಯ ಚರಣ ತಾಡನೆಗಳಿಗೆ ಸಹಿಸಲಾರದೆ ಅಹಿರಾಜನೆಂತಿರ್ದನವೆಂತೆನೆ.

ತ್ರಿಪದಿ:—

ತಾಮರಸಲೋಚನನ ಚರಣೋ
ದ್ದಾಮ ತಾಡನದಿಂದ ವಿಗತ
ಕ್ಷೇಮ ಜೀವಿತನಾದ ಫಣಿಪನು ಭ್ರಾಮಕವೊಲು ೧

ಬಾಗಿಹೆಡೆಗಳು ಜೀವಕುಬ್ಬಸ
ವಾಗಿ ಕಳವಳಗೊಂಡು ರಕುತವ
ಮೂಗುಬಾಯಿಗಳಿಂದಲುಗುಳಿದ ನಾಗನಾಗ ೨

ಅಂಜಿಸುವುದಕೆಬಂದು ತಾನೇ
ಅಂಜಿದವನಂದದಲಿ ಭುಜಗನು
ರಂಜಿಸದೆ ಮೂರ್ಛೆಯನು ತಾಳಿದನಂಜಿಭಯದಿ ೩

ವಚನ:—

ಇಂತು ಮೂರ್ಛಾಕ್ರಾಂತನಾದ ಫಣಿಯ ವೃತ್ತಾಂತವಂ ಕೇಳಿ ನಾಗ ಪತ್ನಿಯರೇನು ಮಾಡಿದರದೆಂತೆನೆ.

ಕಂದ:—

ಕೆಟ್ಟೆವೆನುತುರಗಪತ್ನಿಯ
ರುಟ್ಟುದ ಸವರಿಸಿಕೊಳುತ ತುಟ್ಟಗಿಸುತ ಕಂ
ಗೆಟ್ಟುಮಡದಿಮಕ್ಕಳ ಮುಂ
ದಿಟ್ಟಡಿಗಳ ಸಾರ್ದರಹಿಯಮೆಟ್ಟಿದ ಹರಿಯಂ

ವಚನ:—

ಇಂತು ಬಂದು ಏನೆಂದು ಸ್ತೋತ್ರವಂ ಮಾಡುತಿರ್ದರು.

ಝುಂಪೆ:—

ಜಯನಮೋ ಜಗದೀಶಜಯನಮೋ ಲಕ್ಷ್ಮೀಶ
ಜಯನಮೋ ಜಗದಾತ್ಮ ಜಯತುಪರಮಾತ್ಮ ೧
ಜಯಹರೇಗೋವಿಂದ ಜಯಜಯ ಸದಾನಂದ
ಜಯಸರಸಿಜದಳಾಕ್ಷ ಜಯಭಕ್ತರಕ್ಷ ೨
ಜಯನಂದಸುಕುಮಾರ ಜಯಮನ್ಮಥಾಕಾರ
ಜಯದೇವವರ್ಧಿಷ್ಣ ಜಯಪಾಹಿಕೃಷ್ಣ ೩

ರಾಗ ಭೈರವಿ ರೂಪಕತಾಳ

ಕೃಷ್ಣಪಾಹಿ ಶ್ರೀಕೃಷ್ಣಪಾಹಿ ಪ.
ಕೃಷ್ಣಪಾಹಿಶಿಷ್ಟಜನರಕ್ಷಣ ಉಷ್ಣಕಿರಣತೇಜ ಜಿಷ್ಣುನಿನುತ ಅ.

ಶ್ರೀಕರಾಕಾರನಂದ
ಗೋಕುಲಾಧಾರಭಕ್ತ
ಲೋಕರಕ್ಷ ಶ್ರೀಕಟಾಕ್ಷ
ಪಾಕಶಿಕ್ಷನೇಕರಕ್ಷ ೧

ಕಲಭರಾಜ ಭಯವಿರಾಮ
ವಿಲಸಿತ ಪ್ರಭಾವಸೋಮ
ಕುಲಪವಿತ್ರ ಲಲಿತಗಾತ್ರ
ಜಲಜನೇತ್ರಾಮಲಚರಿತ್ರ ೨

ಪರಮನೂತನಾವರಣ
ಪುರವಿಹರಣ ಚರಣ ಖಾದ್ರಿ
ನರಮೃಗಾಂಗ ದುರಿತಭಂಗ
ವರರಥಾಂಗ ಧರಸುಸಂಗ ೩

ಯಾಲಪದ:—

ದೇವನಿಮ್ಮಡಿಗಳ ರಾಜೀವದರುಶನವೆಂತೊ
ನಾವುಪಡೆದೆವೊಮಾಧವ, ಗೋಪಾಲಕೃಷ್ಣ
ಆವಜನ್ಮದ ಸುಕೃತವೊ ೧

ಪಾವನಾಂಘ್ರಿಸೇವೆಗೆ ದೇವಿನೋಮುವಳಂತೆ ನಾ
ನಾವಿಧತಪೋವ್ರತಂಗಳ, ನಂದಕುಮಾರನಾ
ವಾಪಯೋಗದಸಿದ್ಧರೊ ೨

ಸರಸಿಜಾಸನ ರುದ್ರೇಂದ್ರಸುರರು ಮುನೀಶ್ವರರು ವೇದ
ಪುರುಷನರಿಯದ ಪದಾಬ್ಜವ, ನಾವು ಕಾಣಲಾ
ಶ್ಚರಿಯವಲ್ಲವೆ ದಯಾನಿಧೇ ೩

ಕೀರ್ತಿಸಿ ನಿನ್ನನಾಮವ ಕೂರ್ತುನೆನೆಸಿದವರಸಂಸಾ
ರಾರ್ತಿಹಿಂಗುವವು ಕೇಶವ, ಪ್ರತ್ಯಕ್ಷವಾದ
ಮೂರ್ತಿಯ ವೀಕ್ಷಿಸಿದೆವಾವು ೪

ಇನ್ನು ಭಯಗಳುಂಟೆ ನಮಗೆ ಧನ್ಯರಾರೆಮ್ಮಂತೆ ಧರೆಗೆ
ಪನ್ನಗಾರಿಧ್ವಜಪಾಲಿಸೋ, ಪುರುಷಭಿಕ್ಷ
ವನ್ನು ದೀನಜನಪಾಲನ ೫

ಉತ್ಪಲಮಾಲಾವೃತ್ತ:—

ಶ್ರೀಧರಪದ್ಮನಾಭ ಮುರಳೀಧರ ನಾರದಗಾನಲೋಲ ಸ
ದ್ಭೂಧರ ದೈತ್ಯಲೋಕಧರಣೀಧರವಜ್ರ ಖಗೇಂದ್ರವಾಹ ಧಾ
ರಾಧರವರ್ಣ ಚಾರು ಮಥುರಾಪುರ ಪಾವನರೂಪ ಗಂ
ಗಾಧರ ಪೂಜ್ಯ ಪಾಲಿಸು ಗದಾಧರ ಕೃಷ್ಣ ದಯಾಪಯೋನಿಧೇ

ರಾಗ ಪಂತುವರಾಳಿ ಛಾಪುತಾಳ

ದಯಮಾಡೊ ರಂಗ ಭಯನಿವಾರಣನೆ ಪ.
ಅಭಯವಕೊಡು ದಯಾನಿಧಿ ನೀನೇ ಅ.

ಗರಳದೊಳಗೆನಿಂದೆ ಉರಗಬಂಧದಿನೊಂದೆ
ಸ್ಮರಿಸದಿರಪರಾಧವತಂದೆ ೧
ತಂದೆತಾಯಿ ನೀನೆ ಬಂಧುಬಳಗ ನೀನೆ
ಎಂದೆಂದಿಗೆಮ್ಮದೈವವು ನೀನೆ ೨
ಶತಕೋಟಿಯಪರಾಧ ಪತಿಯಿಂದಾಯಿತೋ ರಾಧಾ
ಪತಿ ನೀನೇಸಲಹೊ ಸದ್ಗುಣಯೂಥ ೩
ಅಡಿಗಳಿಂದಲಿಭಂಗಬಡಿಸೆ ಖಗತುರಂಗ
ಬಿಡಿಸುವರಾರೊ ಕೃಪಾಪಾಂಗ ೪
ಬ್ಯಾಸರಗೊಳಿಸಲ್ಲ ನೀಸಲಹೀಸೊಲ್ಲ
ದಾಸಿಯರ್ರೈ ಸ್ವಾಮಿನಾವೆಲ್ಲ ೫
ತಪ್ಪಾಯಿತುಪಮ್ಮಯ್ಯ ಒಪ್ಪಿಕೊನಮ್ಮಯ್ಯ
ಸರ್ಪನ ನುಳುಹಿ ರಕ್ಷಿಸುಜೀಯ ೬
ಭವಭಯಗಜಸಿಂಹ ವಿವಿಧದೇವಸಿಂಹ
ನವಸಾಲಪುರಿ ಖಾದ್ರಿನರಸಿಂಹ ೭

ಕಂದ:—

ದುಷ್ಟಜನ ಗರ್ವಭಂಜನ
ಶಿಷ್ಟಜನಾಧಾರ ಧೀರಸಂಸ್ತುತಿ ವಿಷಸಂ
ದುಷ್ಟ ನಹಿಪತಿಯ ಪಾಲಿಸು
ಕೃಷ್ಣಾ ಕೃಷ್ಣೇಶಯ ಕೃಷ್ಣ ಕೇಶವಸ್ವಹರೀ

ವಚನ:—

ಈ ಪ್ರಕಾರ ಭುಜಗಪತ್ನಿಯರು ಕರ್ಣಾಭರಣಂಗಳಂ ಕರಪುಟಾಂಜಲಿಯೊಳಿಂಬಿಟ್ಟು ಶೋಕಪೂರ್ಣಾಕುಲೇಕ್ಷಣರಾಗಿ ಸಾಷ್ಟಾಂಗಗಳಂ ಗೈದು ದೈನ್ಯಭಾವದಿಂದ ಸ್ತೋತ್ರವಂಮಾಡಿ ಪತಿಭಿಕ್ಷವಂಬೇಡಿ ತನ್ನ ಶ್ರೀಪಾದಾರವಿಂದಂಗಳಂಬಿಡದೆ ಪಿಡಿದು ಗಡಗಡನೆ ನಡುಗುತ್ತಿರುವ ನಾಗಾಂಗನೆಯರಂ ಕರುಣಾಕಟಾಕ್ಷದಿಂದೀಕ್ಷಿಸಿ ನಸುನಗುತ ತಲೆಗಳಂ ಪಿಡಿದೆತ್ತಿ ಸಂತೈಸಿ ಅಭಯಮನ್ನಿತ್ತು ಸಭಯಂತಾಗಿರುವ ಕಾಳಿಂಗನ ಹೆಡೆಗಳಿಂದಿಳಿದು ನಿಂದಿರುವ ಭಗವಂತನ ಚರಣಾರವಿಂದ ಸ್ಪರುಶನ ಮಹಾತ್ಮೆಯಿಂದ ಪ್ರಜ್ಞಾಯುಕ್ತನಾಗಿ ಕರಕಮಲಂಗಳಂ ಮುಗಿದು ಏನೆಂದು ಸ್ತೋತ್ರಮಂ ಮಾಡುತಿರ್ದನು.

ಶ್ಲೋಕ:—

ಶ್ರೀರಮಾಮನೋಹರಾ ವಿಶೇಷಗುಣಗಣಾರ್ಣವಾ
ಸಾರಸಾಸನಾದಿವಂದ್ಯ ಸತ್ಯಭಾಷಕೇಶವಾ
ಕ್ಷೀರಶರಧಿಶಯನ ರಾಜೀವನಾಭ ಯಾದವಾ
ಪಾರವಿರಹಿತಾನುಕಂಪ ಬಾಲಕೃಷ್ಣ ಪಾಹಿಮಾಂ

ರಾಗ ಫರುಜು ತಾಳ

ಜಯಜಯತೇ ಜಗತ್ರಯದೇವ ಪ.
ಜಯಾಬ್ಜಜಾದಿ ಸಂಸ್ತುತ ನಾಮಧೇಯ ಅ.

ಗೋಕುಲಖೇಲನ ಗೋಕುಲಪಾಲನ ನಾಕಜನಾವನ
ಶ್ರೀಕರಶಶಿವದನ ಅನೇಕರೂಪ ವೈಕುಂಠಸದನ ೧

ಕಂಜದಳೇಕ್ಷಣ ಕುಂಜರರಕ್ಷಣ ಮಂಜುಳಭೂಷಣ
ರಂಜಿತಶುಭಚರಣ ಧನಂಜಯಾರ್ತಿವಿಭಂಜನನಿಪುಣ ೨

ದಾನವಶೋಷಕ ದೀನಸುಪೋಷಕಮಾನಸ ಭಾವಜ
ಜನಕ ಖಾದ್ರಿನೃಸಿಂಹ ದಯಾನಿರವಧಿಕ ೩

ಕಂದ:—

ಕಮಲಾ ಮನೋಹರಾಶ್ರಿತ
ಕಮಲಾಸನ ಮುಖ್ಯದೇವಗಣ ಪರಿಪಾಲಾ
ಕಮಲಾಪ್ತಕೋಟಿಸನ್ನಿಭ
ಕಮಲಾಯುತನೇತ್ರ ಎನ್ನ ಕರುಣಿಸೊ ಕೃಷ್ಣಾ

ರಾಗ ಮಧ್ಯಮಾವತಿ ಆದಿತಾಳ

ಚರಣವನಂಬಿದೆನೊ ರಂಗೈಯನಿನ್ನ
ಚರಣವನಂಬಿದೆನೊ ಪ.

ಚರಣವನಂಬಿದೆ ಕರುಣದಿಪಾಲಿಸೊ
ಶರಣರದುರಿತವ ಹರಣವಗೈವ ಅ.

ಮದನಸ್ಯೆಯನೆ ಅಷ್ಟಮದಗಜಗಳು ಎನ್ನ
ಸದೆಯುತ್ತಲಿರಲಂಕುಶದ ರೇಖೆಗಳಿಪ್ಪ ೧

ಘೋರಕಾಮಕ್ರೋಧಾದ್ಯಾರು ಗಿರಿಗಳೆನ್ನ
ದಾರಿತಪ್ಪಿಸೆ ಶತಧಾರೆ ರೇಖೆಗಳುಳ್ಳ ೨

ಭಕುತನ ಮನೋನಾವೆ ಕಾಕುಭವಾಬ್ಧಿಯೊ
ಳ್ಳಾಕಿಮುಳುಗುತಿರೆ ಪತಾಕರೇಖೆಗಳುಳ್ಳ ೩

ಸದಯಜೀವಾತ್ಮ ಷಟ್ಪದವು ತಾಪತ್ರಯ
ಕ್ಷುಧೆಯುಲಿ ಕುದಿಯಲು ಪದುಮರೇಖೆಗಳುಳ್ಳ ೪

ವರದ ನೂತನಸಾಲ ನರಹರಿಯೆನ್ನಯ
ದುರಿತ ಮಲಿನಪೋಗೆ ಸುರನದಿಯನುಪೆತ್ತ ೫

ಕಂದ:—

ಸಾರವಿರಹಿತವಾದ ಸಂ
ಸಾರದಿ ನಾತೊಳಲಿಬಳಲಿ ಜಡಮತಿಯಾದೆಂ
ಸಾರಸದಳನೇತ್ರ ಸುಧಾ
ಸಾರವನೀವಂಥ ಮುಖವತೋರೊ ಮುರಾರೀ

ರಾಗ ಪಂತುವರಾಳಿ ರೂಪಕತಾಳ

ಮುಖವತೋರಿಸೊ ರಂಗ ಮುಖವತೋರಿಸೊ ಪ.

ನಿಖಿಲಭಕುತರಿಗೆ ಮುಕುತಿ
ಸುಖವನಿತ್ತು ಪೊರೆವಮುದ್ದು ಅ.

ಶಂಬರಾರಿಜನಕ ಎ
ನ್ನಂಬಕ ಚಕೋರಗಳನು
ಬೆಂಬಿಡದೆ ಪೊರೆವಚಂದ್ರ
ಬಿಂಬದಂತೆ ಪೊಳೆವನಿನ್ನ ೧

ಕಮಲಪತ್ರನೇತ್ರ ಎನ್ನ
ಕುಮತಿ ಹೃದಯವೆಂಬುದೊಂದು
ಭ್ರಮರವನ್ನು ಪರಿಕಿಸುವರೆ
ಕಮಲದಂತೆ ತೋರ್ಪದಿವ್ಯ ೨

ಪ್ರಕಟವಾದ ಜೀವಾ
ತ್ಮಕನ ಸುಸ್ವರೂಪವನ್ನು
ಯುಕುತಿಯಿಂದ ತಿಳಿದುನೋಡೆ
ಮುಕುರದಂತೆ ನಿಮಲವಾದ ೩

ಪರಮಪುರುಷ ಎನ್ನ ಜನನ
ಮರಣವೆಂಬ ಹುಲ್ಲುನೀರು
ಪರಿಹರಿಸಲು ಸಾಂಬ್ರಾಣಿ
ತುರಗದಂತೆ ಮೆರೆವದಿವ್ಯ ೪

ಹರಿಯೆ ನೂತನಾವರಣ
ಪುರಿನೃಸಿಂಹ ಎನ್ನದುರಿತ
ಕರಿಯಬಳಗವನ್ನು ಗೆಲಲು
ಭರದಿ ಹಸಿದ ಸಿಂಹದಂತೆ ೫

ಕಂದ:—

ಪರಮಾತ್ಮ ಜನನಮರಣದ
ಬರಿಸುಖದಿಂ ಬಳಲಿ ಜೀವಭಯಗೊಳುತಿದೆ ನೀ
ಕರುಣಿಸಿ ಅಭಯವಪಾಲಿಪ
ಕರಗಳತೋರೆನಗೆ ಕೃಷ್ಣ ಶರಣಾಭರಣಾ

ರಾಗ ಪುನ್ನಾಗವರಾಳಿ ಅಟತಾಳ

ಕರಗಳತೋರೆನಗೆ ಶ್ರೀ ಹರಿ
ಕರಗಳತೋರೆನಗೆ ಪ.
ಕರಗಳತೋರು ಸುದರುಶನ ಶಂಖಾಂ
ಬುಜಹಗದಾದಿಯ ಧರಿಸಿದ ಶುಭಕರ ಅ.

ಶ್ರುತಿಚೋರ ದಾನ—ವನ ಮೀನಾ
ಕೃತಿಯಿಂದಲಿ ಹನನ
ಕೃತನಾಗಿ ನಿಗಮತತಿಯ ಸರಸ್ವತಿ
ಪತಿಗೆ ಕರುಣಿಸಿದತಿವ್ಯದುತರವಹ ೧

ವರಕೂರ್ಮನಾಗಿ—ಮಂದರ
ಗಿರಿಯ ಧರಿಸಲಾಗಿ
ತರುಣಿಯರೂಪದಿ ಸುಧೆಯನು ಸುರರಿಗೆ
ಕರೆದುಣಬಡಿಸಿದ ಪರಮಪಾವನದ ೨

ಧಾತ್ರಿಯನೊಯ್ದವಗೆ—ಸೂಕರ
ಗಾತ್ರದಿಂದ ವಧೆಗೆ
ಪಾತ್ರನಮಾಡಲು ಸ್ತೋತ್ರದಿಪಾಡಿದ
ಧಾತ್ರಿಗೆ ಮಂಗಳಸೂತ್ರವಕಟ್ಟಿದ ೩

ತರಳನವೊರೆಕೇಳಿ—ನೀನರ
ಹರಿರೂಪವತಾಳಿ
ಅರಿಯುರವೆಂಬುವ ಗಿರಿಯನುಸೀಳಿದ
ವರವಜ್ರೋಪಮ ಖರನಖರಗಳಿಹ ೪

ಧೀರಬಲಿಯಬೇಡಿ—ವಟುವಾ
ಕಾರದಿಂದ ಚಾಡಿ-
ಗಾರ ಶುಕ್ರನ ಕಣ್ಣಾಣ್ಛರಿಸಿ ಭೂಮಿಯ
ಧಾರೆಯೆರೆದ ಪನ್ನೀರಿಗೆನೀಡಿದ ೫

ಪೊಡವೀಸುರವರರ—ಬಾಧೆಯ
ಪಡಿಸಿದ ಭೂಭುಜರ
ಪಡೆಯೆಂಬುವ ಕಾರಡವಿಯ ಕಡಿಯಲು
ಕಡುಗಲಿಯಾಗಿಹ ಕೊಡಲಿಯ ಪಿಡಿದಿಹ ೬

ಅಹಿಭೂಷಣಧನುವ—ಖಂಡಿಸಿ
ಬಹುಮುದದೊಳಗಿರುವ
ಮಹಿಜೆಯ ಪಾಣಿಗ್ರಹಣವಮಾಡಿಯೆ
ಅಹಿತದಶಾಸ್ಯನ ನಿಹತವಗೊಳಿಸಿದ ೭

ಸೋಳಸಾಸಿರನಾರಿ—ಪತಿಯೇ
ಬಾಲಬ್ರಹ್ಮಚಾರಿ
ಬಾಲಕೃಷ್ಣ ಗೋಪಾಲರಮನೆಯಲಿ
ಪಾಲುಬೆಣ್ಣೆಗಳ ಕಾಲುವೆಹರಿಸಿವ ೮

ಕಾಣದತ್ರಿಪುರಗಳ—ದೈತ್ಯರ
ರಾಣೇರವ್ರತಗಳ
ಮಾಣಿಸಿರುದ್ರನ ಬಾಣವೆನಿಸಿ ಬಹು
ಜಾಣನೆನಿಸಿದ ಮಹಾನುಭಾವ ನಿನ್ನ ೯

ಮತ್ತೆಯವನಕುಲವ—ಗೆಲುವ ನಿ
ಮಿತ್ತವೇರಿಹಯವ
ಹತ್ತನೆರೂಪದಿ ಉತ್ತಮಭೂಧರ
ಉತ್ತರಿಸಲು ಮೇಲ್ಕತ್ತಿಯಪಿಡಿದಿಹ ೧೦

ಪರಮಪುರುಷಾಕಾರ—ನವ್ಯಾ
ವರಣಪುರಾಧಾರ
ವರಖಾದ್ರೀನರಹರಿ ಸಂತೋಷದಿ
ಶರಣರಿಗಭಯವ ಕರೆದುಕೊಡುತಿಹ ೧೧

ಶ್ಲೋಕ:—

ವಿಶ್ವಸದ್ಮಕಾ ವಿಶ್ವರಕ್ಷಕಾ
ವಿಶ್ವಶಿಕ್ಷಕಾ ವಿಶ್ವತೋಮುಖಾ
ವಿಶ್ವರೂಪಕಾ ವಿಶ್ವವ್ಯಾಪಕಾ
ವಿಶ್ವಭಾವಕಾ ವಿಶ್ವಚಾಲಕಾ

ಕಂದ:—

ಸರ್ವೋತ್ತಮ ಜಗದೀಶ್ವರ
ಸರ್ವಸ್ವಾಮಿರ್ನಿರಮೇಶ ಸರ್ವಾಧ್ಯಕ್ಷಾ
ಸರ್ವಂ ಸಹಾಮನೋಹರ
ಸರ್ವಂ ಸರ್ವಾಪರಾಧ ಕ್ಷಮಿಸುಗೆ ಕೃಷ್ಣಾ ೧

ನಿನ್ನಯಮಹಿಮೆಯ ಪೊಗಳಲು
ಇನ್ನೂರೈಮುಖಗಳುಳ್ಳ ಪನ್ನಗಗಳವೇ
ಪನ್ನಗರಿಪುವಹಸರ್ವಾ
ಪನ್ನಿವಾರಣನೆ ಎನ್ನಮನ್ನಿಸುಕೃಷ್ಣಾ ೨

ಪುರುಷಸೂಕ್ತ ಪ್ರಕಾರದಿಂ
ಪುರುಷೋತ್ತಮನಿಖಿಳಜಗವ ಪುಟ್ಟಿಸಿದನಿರಾ
ಟ್ಪುರುಷನು ನೀನೆಂದರಿಯದೆ
ಪ್ರಾಷಾಧಮನಾಗಿ ನಿನ್ನಬಾಧಿಸಿದೆ ಹರೀ ೩

ಎನ್ನವಗುಣಗಳನೋಡದೆ
ಎನ್ನಯ್ಯನೆ ಎನ್ನನೀಸುಮನ್ನಿಸು ದಯದೋಳ್
ಜನ್ಮಸಾಫಲ್ಯಮಾದುದು
ನಿನ್ನಯದರುಶನದಿ ಕೃಷ್ಣನೀರಜನಾಭಾ ೪

ಇಂದಿನದಿನ ಶುಭದಿನವೆಮ
ಗಿಂದಿನದಿನದಂತೆ ದಿವಸವೆಂದಿಗೆ ಬಹುದೋ
ಇಂದುನೀನಾಗಿ ಕರುಣಿಸಿ
ಬಂದೆನ್ನನು ಪಾಲಿಸಿದೆ ಮುಕುಂದಮುರಾರೇ ೫

ವಚನ:—

ಇಂತು ಮತ್ತೇನೆಂದು ಬಿನ್ನಹಮಾಡುತಿರ್ದನು —

ದ್ವಿಪದಿ:—

ಶ್ರೀಹರೇಹೃತ್ಪದ್ಮಶೃಂಗಾರ ಸದ್ಮ
ಸಾರಸಾಸನವಂದ್ಯ ಸದ್ಗುಣಸಾಂದ್ರ ೧
ನೀನೇದಯಾಸಿಂಧು ನೀದೀನಬಂಧು
ನೀನಾಗಿನಡೆತಂದು ನೀನಿಲ್ಲಿಬಂದು ೨
ಬೊಮ್ಮಾದಿಗಳುಬಯಸಿ ಪಡೆಯದಪೂರ್ಣ
ಬೊಮ್ಮಸ್ವರೂಪಮಾಗಿ ಪ್ರತ್ಯಕ್ಷಮಾಗಿ ೩
ನೀನಾಗಿ ಕರುಣಿಸಿದೆ ನಿರ್ವಿಘ್ನದಿಂದ
ನಾನಾವಡಿಂಗರಿಗ ನಾನಾವಯೋಗ್ಯ ೪
ಶ್ರುತಿಗಳಂದದಿನಿನ್ನ ಸ್ತುತಿಸಬಲ್ಲವನೆ
ಅತುಲಮುಂದರನಂತೆ ಹಿತವನೆಣಿಸಿದನೆ ೫
ಧರಣಿಯಂದದಿ ಯಶೋಧನವಂತನಹನೆ
ತರಳಪ್ರಹ್ಲಾದನಂದದಿ ದೃಢಾತ್ಮಕನೆ ೬
ಬಲಿಯಂತೆ ಭೂದಾನದಲಿ ಮಹೋತ್ತಮನೆ
ತಿಳಿಯೆ ಭೂಸುರರಂತೆ ಕುಲದಲುತ್ತಮನೆ ೭
ಹನುಮನಂದದಿ ಸೇವೆಗಳಿಗನುಕೂಲನೆ
ಘನಪಾರ್ಥನಂತೆ ಸುಜ್ಞಾನಭಾಜನನೆ ೮
ಮದನಾರಿಯೋಲ್ ನಿನ್ನಮಂತ್ರಜಪಿಸುವನೆ
ಸದಾಹೃದಯರಂತೆ ನಿನಗೆದುರುನೋಡುವನೆ ೯

ನಾರದನಪರಿಯ ವೀಣಾರವದಿಂದ
ನಾರಾಯಣನೆ ನಿನ್ನ ನಾಮಧಾರಕನೆ ೧೦

ಲೋಕಂಗಳರಿಯೆ ರುಕ್ಮಾಂಗದನತೆರದಿ
ಏಕಾದಶೀವ್ರತವ ನಿನಿತುಮಾಡಿದೆನೆ ೧೧

ಅಂಬರೀಷನವಿಧದೊಳಮಲ ದ್ವಾದಶಿಯ
ನಂಬಿನಾಮಾಡಿನಿನ್ನನು ಮೆಚ್ಚಿಸಿದೆನೆ ೧೨

ಮತ್ತಾನೆಯಂತೆ ಸರ್ವದೇವೋತ್ತಮನೆಂದು
ಚಿತ್ತದೊಳ್ತಿಳಿದು ಬಂದು ಭಜಿಸಿದೆನೆ ೧೩

ನಿಮಿಷಾರ್ಥ ಇವರುಮೊದಲಾಗಿರ್ದ ವಿವಿಧ
ನಿವಹದಂದದಿ ನಾನು ನಿನ್ನಬಲ್ಲವನೆ ೧೪

ಆರೆಂದು ಎನ್ನನೀನಾರೈದೆ ದೇವ
ಕ್ರೂರಕಲ್ಮಷ ನಿಸ್ಸಾರಜೀವಕನ ೧೫

ಕುಲದಿನೋಡಲು ಸರ್ಪಕುಲದಲ್ಲಿ ಸಂಭವನು
ನೆಲೆಯಕಾಣಲು ವಿಷೋಜ್ವಲವಾದ ಮಡುವು ೧೬

ನಡತೆಯೊಳ್ಕೆತೆನೆ ದುರ್ನಡತೆಗೆ ಮೊದಲು
ಒಡನಾಡೆ ಸರ್ವವಿಷವ್ಯಾಪಾರದವನು ೧೭

ಹಿತವುಳ್ಳುದೆನೆ ಜೀವಹಿಂಸಕರಗುರುವು
ಕೃತಕರ್ಮಗಳನೆಣಿಸಲತಿ ಪಾಪಕೃತ್ಯ ೧೮

ಹಾಲನೆರೆದುಪಕಾರರಾದವರಿಂಗೆ
ಹಾಲಾಹಲವನೆರೆವ ಹಾವುಗಳು ನಾವು ೧೯

ಅತಿಭಯಂಕರವಾದ ಅಹಿಯಶರೀರ
ಅಹಿಯೆಂದರೋಡುತಿಹರಂಜಿ ಜೀವಿಗಳು ೨೦

ಇಂತಿಪ್ಪದುರ್ಗಣದಂತ್ಯರಾಹಿತ್ಯ
ವಂತನ ಸಕುಟುಂಬನನ್ನುರಕ್ಷಿಸಿದೆ ೨೧

ಎನ್ನಪರಾಧಗಳನ್ನು ಮನ್ನಿಸಿದೆ
ನಿನ್ನಂತೆ ದೇವತೆಗಳಿನ್ನುಂಟೆ ಜಗದಿ ೨೨

ಛಲರೆಭಾವುರೆ ಮಹಾಭಯನಿವಾರಣನೆ
ಜಲಜಾಕ್ಷನೀನಹುದು ದೇವದೇವೋತ್ತಮನೆ ೨೩
ಎಂದು ಕಾಳೀಯನಾಮಫಣಿರಾಜನೆರಗೆ
ಕಂಜಾಕ್ಷನುಪಚರಿಸಿ ಇಂತೆಂದನಾಗ ೨೪

ವಚನ:—

ಈ ಪ್ರಕಾರದಿಂ ಸ್ತೋತ್ರವಂಮಾಡಿದ ಕಾಳಿಂಗನೊಡನೆ ಕಾಳಿಂಗ ಮರ್ದನನೇನೆನ್ನುತಿರ್ದನು.

ತ್ರಿಪದಿ:—

ಅಂಜದಿರುಫಣಿರಾಜ ಮತ್ಪದ
ಕಂಜದರುಶನವಾದ ಜೀವರ
ಪುಂಜಕಿತರದ ಭಯಗಳಿಲ್ಲಿಹುದಂಜೆ ಇವರು ೧

ಮನ್ನಿಸಿದೆ ನಿನ್ನನುವ ಮನದಲಿ
ಇನ್ನುಸಂಶಯವಿಲ್ಲ ಎನಗೆಲೊ
ಪನ್ನಗೇದ್ರಂನೆ ಸಕಲಗುಣಸಂಪನ್ನನಾಗೈ ೨

ಕ್ಷಿತಿಯೊಳಗೆ ಕಾಳೀಯಮರ್ದನ
ಕಥೆಯಕೇಳುವ ಪೇಳ್ವಜನಕಹಿ
ತತಿಗಳಿಂ ಭಯಮಿಲ್ಲ ನಿಶ್ಚಯಮುತವಿದೀಗ ೩

ಅವನೀಚರಿತೆಯನು ಬರೆಯುವ
ನಾವವಾಚಿಪ ಪಠಿಪ ಬೋಧಿಪ
ಜೀವನಿಗೆ ವಿಷಭಯಗಳಿಲ್ಲೆಲೆ ಪಾವನಾಂಗ ೪

ಎನ್ನನಾಮಸ್ಮರಣೆಗೈವುತ
ಲೆನ್ನಮೂರ್ತಿಧ್ಯಾನಮಾಡುತ
ಲೆನ್ನಭಕ್ತಿಯೆ ಮುಖ್ಯವಾಗಿರು ಧನ್ಯನಹೆನೀ ೫

ಝಂಪೆ:—

ಈವಿಪಿನದೊಳಗಿಪ್ಪ ಜೀವಜಾಲಂಗಳಿಗೆ
ಭಾವಿಸಲುಬೇರಿಲ್ಲ ಜೀವನವುಬಯಸಿ ೧

ನೀನಿರಲು ಈ ಜಲವು ಪ್ರಾಣಧಾರಕರಿಂಗೆ
ಪಾನಭಾಜನವಾಗದಾ ನಿಮಿತ್ತದಲಿ ೨
ನಿನ್ನ ಕುಲಕೋಟಿಸಹ ಇನ್ನು ನೀನಿಲ್ಲಿರದೆ
ಪನ್ನಗೇಂದ್ರನೆ ಗಮಿಸು ಪನ್ನುತಾರ್ಣವಕೆ ೩
ರಮಣಕದ್ವೀಪಾಖ್ಯ ವಿಮಲನೆಲೆಯೊಂದಿಹುದು
ರಮಣೀಯದಿಂಪೋಗಿರಮಿತಮುದದಿಂದ ೪
ಪನ್ನಗಾರಿಯುಭಯಕೆ ಖಿನ್ನನಾಗದೆ ಮನದಿ
ನಿನ್ನ ಶಿರದೊಳಗಿರುವುವೆನ್ನ ಚರಣಗಳು ೫
ಚಿಹ್ನೆಯನು ನೆರೆನೋಡಿ ಮನ್ನಿಸುವ ವಿಹಗೇಂದ್ರ
ಎನ್ನ ಕಿಂಕರನಾಗೆ ಇನ್ನು ಭಯವುಂಟೆ [illegible]
ನಿನ್ನಂಜಿಸುವರಿಲ್ಲ ನೀನಿತರರಂಜಿಸದೆ
ಪನ್ನಗತ್ವವನುಳಿದು ಧನ್ಯನೀನಾಗೈ ೭

ಏಕತಾಳ:—

ಇಂತು ನಿರೂಪವನಂತನು ಕರುಣಿಸೆ
ಸಂತತಿ ಸಹ ಕಡುಸಂತಸ ವೆರಸಿ ೧
ದಿವ್ಯಾಮೃತಗಳು ದಿವ್ಯಮಾಲಾಂಬರ
ದಿವ್ಯಗಂಧಾಕ್ಷತೆಯನು ತರಿಸಿದನು ೨
ದಿವ್ಯವಿಭೂಷಣ ದಿವ್ಯನೈವೇದ್ಯವ
ದಿವ್ಯತಾಂಬೂಲ ದಕ್ಷಿಣೆಯು ತರಿಸಿದನು ೩
ದಿವ್ಯಧೂಪದೀಪ ದಿವ್ಯನೀರಾಜನ
ದಿವ್ಯಮಂತ್ರಪುಷ್ಪವ ರಚಿಸಿದನು ೪
ಪ್ರಾಕೃತವಾದ ಪ್ರಾಕೃತವಸ್ತುಗ
ಳೀ ಕೃತಪಾಲನಿಗೆನೆ ತರಿಸಿದನು ೫
ಈಪರಿಯಲಿ ಷೋಡಶೋಪಚಾರಗಳಿಂದ
ಆ ಪರಮಾತ್ಮನ ತಾ ಪೂಜಿಸಿದನು ೬
ಇಂತು ಸಬಾಹ್ಯಾಭ್ಯಂತರ ಪೂಜೆಯ
ನಂತರವಗೈದನನಂತನ ಮುದದಿ ೭

ಅರ್ಥರೇಖೆ:—

ಸಾಷ್ಟಾಂಗದಿ ನಮಸ್ಕಾರಗೈದ ೧
ಜಯಜಯ ಹರಿಸರ್ವೋತ್ತಮ ಎಂದ ೨
ಇಷ್ಟಜನಸರ್ಪರನೊಡಗೊಂಡ ೩
ಕೃಷ್ಣಮೂರ್ತಿಯ ಹೃತ್ಕಮಲದೊಳಿಟ್ಟ ೪
ಪುನರಪಿ ಹರಿಯಾಜ್ಞೆಯ ನೆರೆಪಿಡಿದ ೫
ಆನಂದಾಶ್ರುವೆಂಬ ಸುದ್ದಿಯ ನೆನೆದ ೬
ರಮಣಕದ್ವೀಪಾಭಿಮುಖವಾಗಿ ನಡೆದ ೭

ವಚನ:—

ಈ ಪ್ರಕಾರದಿಂದ ದುಷ್ಟನಿಗ್ರಹ ಶಿಷ್ಟಪರಿಪಾಲಕನಾದ ಭಗವಂತನು
ಕಾಳೀಯ ನಾಮಧೇಯನಾದ ಸರ್ಪರಾಜನ ದುಷ್ಟತ್ವವಂ ಪರಿಹರಿಸಿ ಶಿಷ್ಟ
ನಂ ಮಾಡಿ ಇಷ್ಟಾರ್ಥಂಗಳನ್ನಿತ್ತು ಆತನ ವಿಶಿಷ್ಟ ಸರ್ಪಜಾಲವಂ ತುಷ್ಟ
ರಂಗೈದು ರಮಣಕಾದ್ವೀಪಾಲಯನಿವಾಸಿಯಾಗಿರೆಂಬು ಪೊಮ್ಮ್ರಡಿಸಿ, ತದನಂ
ತರದಲ್ಲಿ ಇಚ್ಛಾಮಾತ್ರದಿಂದ ತತ್ಸರೋವರದ ವಿಷೋದಕವಂ ಅಮೃತೋದ
ಕವಂ ಮಾಡಿ ತಜ್ಜಲಪಾನಮಂಗೈದು ಆಶ್ಚರ್ಯಚಿತ್ತರಾದ ನಂದಗೋಪ
ಯಶೋದಾದಿ ಗೋಪಾಲರಂ ಗೋವ್ರಗಳಂ ಒಡಗೊಂಡು ಪೊರಮಡುವ
ಸಮಯದೊಳ್ ಅಂಬರದೊಳಾಗುವ ದೇವದುಂದುಭಿಧ್ವಾನವಂ ಜಯ
ಜಯಾರಾವವಂ ಆಲಿಸುತ ಮಂದಾರಪುಷ್ಪವೃಷ್ಟಿಯಂ ನಿರೀಕ್ಷಿಸುತ್ತ
ಪೂರ್ಣಾನಂದ ಸಂದೋಹಯುಕ್ತನಾಗಿ ಸಂಧ್ಯಾಕಾಲದೊಳ್ ನಂದಗೋ
ಕುಲವಂ ಸಾರ್ದು ಗೋವ್ರಗಳ ಬೃಂದಂಗಳಂ ಅವರವರ ನಿಜಮಂದಿರಂಗ
ಳಿಗೆ ಹೋಗಲು ಗೋಪನಂದರಿಗಾಜ್ಞಾಪಿಸಿ ಇಂದಿರಾನಿವಾಸಸ್ಥಾನವಾದ
ನಂದಾಲಯಮಂ ಕುರಿತು ಬಂದ ಇಂದೀವರ ಶ್ಯಾಮನಾದ ಗೋವಿಂದನಾದ
ಮುಕುಂದನಂ ನಂದಾಂಗನೆ ತಕ್ಕೈಸಿ ಕಾಳಾಹಿಯಿಂದ ನೀನೊಂದು ಬಂದೆ
ಕಂದಾ, ದಿವ್ಯಾರವಿಂದನಯನಾ ಪುರಂದರಾದಿವಂದ್ಯಾ, ಕೃಷ್ಣಾ ಕೃಷ್ಣೆಲ
ಯ್ಯಾ ಬಾರೆಂದು ರಂಗಾ ರಂಗೈಯ್ಯಾ ಬಾರೆಂದು ನಂದಾಂಗನೆ ಮುದ್ದಾಡಿ
ರತ್ನಂಗಳಿಂದ ಶೃಂಗಾರವಾದ ಹೊಂಗೆಲಸದ ಹೊಸ ಹಸೆಯ ಮಂಟಪದಿ
ಕರುಣಾಂತರಂಗನಂ ವಿಹಂಗತುರಂಗನಂ ಕುಳ್ಳಿರಿಸಿ ಅಂಗನಾಮಣಿಗಳು

ಕೂಡಿ ಗಂಗಾಜನಕನಾದ ಮಂಗಳಾರಮಣನಿಗೆ ಜಯಮಂಗಳಂ ಪಾಡುತ್ತ ಶುಭಮಂಗಳದ ಮಂಗಳಾರತಿಯಂ ಗೋಪಾಂಗನೆಯಾದ ಯಶೋದಾದೇವಿ ಪಾಡಿಪರಸುತಿರ್ದಳದೆಂತೆನೆ.—

ರಾಗ ರೇಗುಪ್ತಿ ತಾಳ

ಶ್ರೀವಂಚಿತಗುಣಹಾರನೆ ವೇದೋ
ದ್ಧಾರ ಜಲಚರನೆ ಬಾ ಪರ್ವತ
ಭಾರವವಹಿಸಿ ಮನೋರಥ ಸುರರಿಗೆ
ಬೀರಿದ ಕೂರುಮ ಬಾ ಶುಭಕರ
ಧಾರುಣಿಚೋರ ಸುರಾರಿಯು ವರಹವ
ತಾರದಿ ಗೆಲಿದನೆ ಬಾ ಸ್ತಂಭದಿ
ತೋರೆನೆ ದೈತ್ಯಕುಮಾರನಿಗೊಲಿದ
ನಾರಸಿಂಹನೆನೀ ಬಾ
ಹರಿಯೇ ಬಾರೆಂದು ಹಸೆಗೆ ಕರೆದರು ಶೋಭಾನೆ ೧

ಭೂಮಿಯ ನೀರಡಿ ಪ್ರೇಮದಿ ಮಾಡಿದ
ವಾಮನರೂಪನೆ ಬಾ ಭೂಭುಜ
ಸ್ತೋಮವಗೆಲಿದನಿರಾಮಯಭಾರ್ಗವ
ರಾಮದಯಾನಿಧಿ ಬಾ ಜಗದಭಿ
ರಾಮ ದಶಮುಖವಿರಾಮ ರಮಾಧಿಪ
ರಾಮಚಂದ್ರ ನೀಬಾ ಯದುಕುಲ
ಸೋಮಕ ಕಾಳೀಯ ಫಣಿಯ ಮಹಾಮದ
ಸೋಮ ವಿಧುಂತುದ ಬಾ
ಹರಿಯೇ ಬಾರೆಂದು ಹಸೆಗೆ ಕರೆದರು ಶೋಭಾನೆ ೨

ಹರಗೋಸುಗ ಸತಿಯರ ವ್ರತಗಳನಪ
ಹರಿಸಿದ ಬೌದ್ಧನೆ ಬಾ ಕರದಲಿ
ಧರಿಸಿ ಖಡುಗವನು ತುರಗವನೇರಿದ

ವರಕಲ್ಕಿ ನೀ ಬಾ ಭಕುತರ
ಕರೆದು ಶುಭಂಗಳ ಕರುಣಿಸಿ ಸಲಹುವ
ಪರಮಾತ್ಮನೆ ನೀ ಬಾ ನಮ್ಮನು
ಪೊರೆವ ನೂತನಾವರಣ ಪುರದ ಖಾದ್ರಿ
ನರಸಿಂಹನೆ ನೀ ಬಾ
ಹರಿಯೇ ಬಾರೆಂದು ಹಸೆಗೆ ಕರೆದರು ಶೋಭಾನೆ ೩

ರಾಗ ಕಲ್ಯಾಣಿ ಆದಿತಾಳ

ಮಂಗಳಂ ಮಂಗಳಂ ಭವಂತುತೇ
ಮಂಗಳಂ ಮಂಗಳಂ ಪ.

ಮಂಗಳಧರ ಮಂಗಳಪ್ರದ
ಮಂಗಳಾಂಗ ಸುಮಂಗಳಕೃತ ಅ.

ಶುಂಡಾಲವರದ ಮಾರ್ತಾಂಡಾಭ ಕಾಯದ
ಕುಂಡಲಿಗರ್ವ ವಿಖಂಡನ ಚರಣ
ಅಂಡಜಗಮನ ಚಂಡತರದ ವೇ
ದಂಡಕರ ದೋರ್ದಂಡವರ ಶಶಿ
ಮಂಡಲಾನನ ಕುಂಡಲದ್ವಯ
ಗಂಡಲಸಿತಾಖಂಡಲಾರ್ಚಿತ ೧

ಕಂದರ್ಪಜನಕಾರವಿಂದನಾಭ ಗುಣ
ವೃಂದ ಗೋಕುಲ ಗೋಪವೃಂದಾವನಾ
ನಂದಸುತ ಗೋವಿಂದ ಪರಮಾ
ನಂದ ಮುಚುಕುಂದನುತ ಧೃತ
ಮಂದರ ಬಹುಸುಂದರ ಸಿತ
ಕಂಧರಸ್ತುತ ಕಂಧರೋಜ್ವಲ ೨

ಅಕ್ಷಯ ಕರುಣಾಕಟಾಕ್ಷವೀಕ್ಷಣ ಶುಭ
ಲಕ್ಷಣದೇಹ ವಿಚಕ್ಷಣಭರಿತ
ಅಕ್ಷರ ಪ್ರತ್ಯಕ್ಷರೂಪಾ
ಧೋಕ್ಷಜಾಚ್ಯುತರಕ್ಷ ಕುರುಕುಲ
ಶಿಕ್ಷ ಪಾಂಡವಪಕ್ಷ ಕಮಲದ
ಳಾಕ್ಷ ನರಹರಿಯಕ್ಷ ನಿರುತ ೩

ವಚನ:—

ಈ ಪ್ರಕಾರದಿಂದ ಶೋಭಾನೆ ಮಂಗಳಾರ್ತಿಗಳಂ ಪಾಡಿ ಕೃಷ್ಣಮೂರ್ತಿಗೆ ರಕ್ಷೆಗಳಂ ಕಟ್ಟಿ ಗೋಪೀದೇವಿ ದಿನದಿನದಿ ಪ್ರವರ್ಧಮಾನನಂ ಮಾಡುತ್ತಿರಲು ಪರಮಾತ್ಮನು ಅನೇಕವಿಧವಾದ ಲೀಲೆಗಳಂ ನಟಿಸುತ್ತ ದುಷ್ಟನಿಗ್ರಹ ಶಿಷ್ಟಪರಿಪಾಲನವಂ ಮಾಡುತ್ತ ಸುಖದಿಂದ ಗೋಕುಲದೊಳಿರ್ದನೆಂದು ಪ್ರಾಯೋಪವೇಶದೀಕ್ಷಾಧುರಂಧರನಾದ ಪರೀಕ್ಷಿತರಾಯನಿಗೆ ಶುಕಮುನೀಂದ್ರನು ಬೋಧಿಸಿದ ಕಾಳೀಯಮರ್ದನ ಚರಿತ್ರೆಯಂ ನೈಮಿಶಾರಣ್ಯನಿವಾಸಿಗಳಾದ ಶೌನಕಾದಿ ಋಷಿಗಳಿಗೆ ಸೂತಪೌರಾಣೀಕನು ಪೇಳಿದ ಕಥಾಸಮಾಪ್ತಿಗೋಸ್ಕರ ಕವೀಶ್ವರನು ಶ್ರೀಹರಿಗೆ ಸಮರ್ಪಣೆಯಂ ಮಾಡಿದನದೆಂತೆನೆ.—

ದ್ವಿಪದಿ:—

ಶ್ರೀಲಕ್ಷ್ಮೀಯರಸನಿಗೆ ನೀಲವರ್ಣನಿಗೆ
ಬಾಲಗೋಪಾಲನಿಗೆ ಮೂಲಪುರುಷನಿಗೆ ೧
ಸರ್ವಂಸಹಾಧವಗೆ ಸರ್ವೇಶ್ವರಂಗೆ
ಪರ್ವೇಂದುವದನನಿಗೆ ಪರಮಪಾವನಗೆ ೨
ವಸುದೇವನಂದನಗೆ ಕುಸುಮಾಸ್ತ್ರಪಿತನಿಗೆ
ಅಸಮಾನಗುಣಗಣಗೆ ಬಿಸಜನಾಭನಿಗೆ ೩
ರುಕ್ಮಿಣೀನಾಥನಿಗೆ ರುಕ್ಮಮದಹರಗೆ
ರುಕ್ಮಾಂಗಧಾರನಿಗೆ ರುಕ್ಮಚೇಲನಿಗೆ ೪

ದೇವಕೀಪುತ್ರನಿಗೆ ದೇವದೇವನಿಗೆ
ಪಾವನಚರಿತ್ರನಿಗೆ ಪಾಪದೂರನಿಗೆ ೫

ಶುಂಡಾಲವರದನಿಗೆ ಪಾಂಡವಪ್ರಿಯನಿಗೆ
ಖಂಡೇಂದುಧರನುತಗೆ ಕುಂಡಲೀಶಯನನಿಗೆ ೬

ಸ್ತಂಭೋದ್ಭವನಿಗೆ ಸದಾರಂಭೇಶನುತಗೆ
ಶುಂಚನ್ಮೃದಾರಂಭ ಗಂಭೀರಹರಿಗೆ ೭

ಪ್ರಹ್ಲಾದವರದನಿಗೆ ಮಿಹಿರಾಂಶುನಿಭಗೆ
ಬಹುಗುಣಾರ್ಣವಗೆ ಸನ್ನಿಹಿತಶೋಭನಿಗೆ ೮

ಕಾಳೀಯಮರ್ದನಗೆ ಕುಚೇಲಪಾಲನಿಗೆ
ಮೂಲೋಕದೊಡೆಯನಿಗೆ ಶ್ರೀಲಲಾಮನಿಗೆ ೯

ಅದ್ರೀಶಧರಗೆ ಸಮುದ್ರಶಯನನಿಗೆ
ಭದ್ರದಾಯಕನಾದ ಖಾದ್ರಿನರಹರಿಗೆ ೧

ಅಂಕಿತವಾಗಿ ಸಾಲಂಕಾರದಿಂದ
ಪಂಕಜಾಕ್ಷನ ಪಾದಪಂಕಜಂಗಳಿಗೆ ೧೧

ಹರುಷದಿಂದರ್ಪಿಸಿದೆ ಅತಿಭಕ್ತಿಯಿಂದ
ವಿರಚಿಸಿದೆ ಮಾರ್ಜಗದ್ವಿಖ್ಯಾತವಾಗೆ ೧೨

ಬಿರುದಾದನವಸಾಲಪುರ ಶಾಸನಾಂಕ
ಕರುಣಾಬ್ಧಿಯಹ ಉಲುಚುಕಮ್ಮೆ ವಂಶಜನು ೧೩

ಚಿತ್ರವಿಶ್ವಾಮಿತ್ರಗೋತ್ರಪವಿತ್ರ
ಪಾತ್ರನಾಪಸ್ತಂಭ ಸೂತ್ರಸುಚರಿತ್ರ ೧೪

ಧೀರಾತ್ಮನಾದ ಕಂಠೀರವವರಪೌತ್ರ
ಶ್ರೀರಂಗನಾಮಾಖ್ಯ ಶೇಖರರಪುತ್ರ ೧೫

ಗಿರಿಯಂಬಿಕಾಗರ್ಭಶರರಾಶಿರಾಜೇಂದ್ರ
ನರಸಿಂಹಚರಣ ಕರುಣಾರಸಾಭರಣ ೧೬

ಪರಮವೈಷ್ಣವರಪದಪದ್ಮ ಷಟ್ಚರಣ
ಗುರುವರ್ಯರಾದ ಚಂದ್ರರಸಾರ್ಯಶಿಷ್ಯ ೧೭

ವರಕವೀಶ್ವರತಿಪ್ಪಣಾರ್ಯ ನಾಮಾಂಕಿತನಿಂ
ವಿರಚಿತವಾದ ಕಾಳೀಯಮರ್ದನನ ೧೮

ಚರಿತವಿದು ನೃಸಿಂಹನಪದಪದ್ಮಗಳಿಗೆ
ಎರಗಿಸಮರ್ಪಿಸಿದೆ ಗುರುಭಕ್ತಿಯಿಂದ ೧೯

ಯತಿಗಣಪ್ರಾಸ ಮೊದಲಾದಲಕ್ಷಣಗ
ಳತಿಶಯದೊಳರಿಯೆ ಶ್ರೀಪತಿಯೆಗತಿಯೆನಗೆ ೨೦

ಎನ್ನ ವಿಷವಾಕ್ಯದಿಂದೇನುನ್ಯೂನಗಳು
ಪನ್ನತವಿಷರಾಶಿಶಯನನಾದರ್ದಿಗೆ ೨೧

ಎನ್ನಮೃತವಾಕ್ಯದಿಂದೇನು ಫಲವುಂಟು
ಪನ್ನತಾಮೃತರಾಶಿ ಶಯನನಾದಂಗೆ ೨೨

ಸರ್ವಶಬ್ದಾರ್ಥ ಶ್ರೀಹರಿಯಲ್ಲದನ್ಯ
ವಿಪುರ್ದೇಶಾಸ್ತ್ರದೊಳ್ ವಿಷ್ಣುಮಯಂಜಗತ್ ೨೩

ಅದರಿಂದಲೀಕೃತಿಯನಾದರಿಸಿ ಬುಧರು
ಮುದದಿಂದಗ್ರಹಿಸುವುದು ಮುಕುರದಂದದಲಿ ೨೪

ತಪ್ಪಿಲ್ಲದಿರುವುದೇ ಧರ್ಮಮಾನಸರು
ಒಪ್ಪದಿಂ ತಿದ್ದುವುದು ವರ್ಣಗಳನೊಲಿದು ೨೫

ಈ ಚರಿತ್ರೆಯನು ಹೇಳುವರ ಕೇಳುವರ
ವಾಚಿಸುತ ಪಠಿಸುವರ ಬರೆಯುವರ ನಿವರ ೨೬

ಸೌಖ್ಯಂಗಳಿಂದ ಸಂತಸದಿ ಬಹುಕಾಲ
ರಕ್ಷಿಪನು ಬಾಲಗೋಪಾಲ ಶ್ರೀಕೃಷ್ಣ ೨೭

ಪರಮಾತ್ಮ ಶ್ರೀರಮಾಬ್ರಹ್ಮಾದಿವಂದ್ಯ
ಹರಿಯಾದ ಶ್ರೀಖಾದ್ರಿನರಹರಿಯ ಕೃಪೆಯಿಂದ ೨೮

ಭೂಚಕ್ರದೋಳ್ ಮಹಾಪೂಜಿತವಾಗಿ
ಆಚಂದ್ರತಾರಾರ್ಕಮಿರಲಿ ಈಕೃತಿಯು ೨೯

ಶ್ರೀವಾಯುಹನುಮದ್ಭೀಮಮಧ್ವಾಂತರ್ಗತ ಶ್ರೀಹಯ
ಗ್ರೀವ ರಾಮಕೃಷ್ಣ ವೇದವ್ಯಾಸಾತ್ಮಕ
ಶ್ರೀಲಕ್ಷ್ಮೀನೃಸಿಂಹಪ್ರಿಯತಾಂ

ಶ್ರೀ ಕೃಷ್ಣಾರ್ಪಣಮಸ್ತು



## ಶ್ರೀ ಕರ್ಣಾಟಕ
## ಹರಿದಾಸ ಕೀರ್ತನ ತರಂಗಿಣಿ

(ದಾಸ ಸಾಹಿತ್ಯ ಸಂಗ್ರಹ)

ಕರ್ಣಾಟಕದಲ್ಲಿ ಸುಪ್ರಸಿದ್ಧವೆನಿಸಿ, ಜನತೆಗೆ ಭಕ್ತಿ ಜ್ಞಾನವೈರಾಗ್ಯಾದಿಗಳು, ಲೋಕನೀತಿ ಧರ್ಮಸೂಕ್ಷ್ಮಗಳು ವೇದಶಾಸ್ತ್ರ ಪುರಾಣಾದಿಗಳ ಸಕಲ ಧರ್ಮ ರಹಸ್ಯಗಳು, ಇವನ್ನು ಮೃದು ಮಧುರ ತಿಳಿಗನ್ನಡ ಭಾಷೆಯಲ್ಲಿ ಬೋಧಿಸಿ ಕರ್ಣಾಟಕ ಸಂಗೀತ ಸಾಹಿತ್ಯಗಳೆರಡನ್ನೂ ಉದ್ಧರಿಸಿವೆ. ದಾಸವರ್ಯರ ಅಮೂಲ್ಯ ಕೀರ್ತನೆ ಪದ ಸುಳಾದಿಗಳ ಸಂಗ್ರಹ, ನಾಸ ಸಾಹಿತ್ಯದ ನಿಧಿ.

---

| | ಗ್ಲೇಜು ರೂ. | ರಫ್ ಅ. |
|---|---|---|
| ಶ್ರೀ ಪುರಂದರದಾಸರ ಕೃತಿಗಳು ಭಾಗ ೧/೨ | ೫/- | |
| ಶ್ರೀ ಕನಕದಾರರ ಮತ್ತು ಜಗನ್ನಾಥದಾಸರ ಕೃತಿಗಳು | (ಅಚ್ಚಿನಲ್ಲಿದೆ.) | |
| ಶ್ರೀ ವಿಜಯದಾಸರ ಕೃತಿಗಳು | ೧/೨ | ೧೨ |
| ಶ್ರೀ ವಾದಿರಾಜ ಸ್ವಾಮಿಗಳವರ ಕೃತಿಗಳು | /೨ | ೧೨ |
| ಶ್ರೀ ಪಾದರಾಯ ಸ್ವಾಮಿಗಳ ಮತ್ತು ಶ್ರೀ ವ್ಯಾಸರಾಜಸ್ವಾಮಿಗಳ ಕೃತಿ | ೧/೨ | ೧೨ |
| ಶ್ರೀ ಗೋಪಾಲದಾಸರ ಮತ್ತು ಶ್ರೀ ಮೋಹನದಾಸರ ಕೃತಿಗಳು | ೧/೨ | ೧೨ |
| ಶ್ರೀ ಹರಿಕಥಾಮೃತಸಾರ | ೧/೮ | ೧/೨ |
| ಶ್ರೀ ಹನುಮದ್ವಿಲಾಸ (ಯಕ್ಷಗಾನ) | ೦/೧೨ | |
| ಶ್ರೀ ಕುಚೇಲೋಪಾಖ್ಯಾನ ,, | ೦/೧೪ | |
| ಶ್ರೀ ಕಾಳೀಯ ಮರ್ಧನ | ೦/[illegible] | |

---

ಸುಬೋಧ ಪ್ರಕಟನಾಲಯ, ಬೆಂಗಳೂರು-೨.